# ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳು

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕರು

**ಸವಿತಾ ಕುಲಕರ್ಣಿ**

ಮಾರ್ಗದರ್ಶಕರು

**ಪ್ರೊ|| ಓ. ಎಲ್. ನಾಗಭೂಷಣಸ್ವಾಮಿ**

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ ಹಂಪಿ**
ವಿದ್ಯಾರಣ್ಯ - ೫೮೩ ೨೨೧.

ಅಕ್ಟೋಬರ್ ೩೧ ೧೯೯೫

# ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳು

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ


ಸಂಶೋಧಕಳು

ಸವಿತಾ ಕುಲಕರ್ಣಿ





ಮಾರ್ಗದರ್ಶಕರು

ಪ್ರೊ|| ಓ. ಎಲ್. ನಾಗಭೂಷಣಸ್ವಾಮಿ



ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ - ೫೮೩ ೨೨೧.

ಅಕ್ಟೋಬರ್ ೩೧ ೧೯೯೫




: ಪ್ರಮಾಣ ಪತ್ರ :

'' ವಚನಗಳಲ್ಲಿ ಕನ್ನಡ ಕಾವ್ಯ ವಿಮರ್ಶೆಯ ಪರಿಕಲ್ಪನೆಗಳು'' ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ, ಪ್ರೊ|| ಟಿ.ಎಲ್. ನಾಗಭೂಷಣ ಸ್ವಾಮಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ.

ಸವಿತಾ ಕುಲಕರ್ಣಿ.

ಸವಿತಾ ಕುಲಕರ್ಣಿ,
ಸಂಶೋಧನಾ ವಿದ್ಯಾರ್ಥಿ,
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ.

ದಿನಾಂಕ: ೩೦|೧೦|೯೫

ಸ್ಥಳ : ವಿದ್ಯಾರಣ್ಯ

: ಧೃಢೀಕರಣ ಪತ್ರ :

ಕುಮಾರಿ ಸವಿತಾ ಕುಲಕರ್ಣಿ ಅವರು ''ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳು'' ಎಂಬ ಶೀರ್ಷಿಕೆಯ ಈ ಸಂಶೋಧನ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಸವಿತಾ ಕುಲಕರ್ಣಿ ಅವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ.

ಪ್ರೊ|| ಓ.ಎಲ್. ನಾಗಭೂಷಣ ಸ್ವಾಮಿ
ಮಾರ್ಗದರ್ಶಕರು
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ

ದಿನಾಂಕ: ೩೦।೧೦।೯೪
ಸ್ಥಳ : ವಿದ್ಯಾರಣ್ಯ

: ಕೃತಜ್ಞತೆಗಳು :

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನ ಮಾಡುವುದಕ್ಕೆ ಅವಕಾಶ ನೀಡಿದ ಮಾನ್ಯ ಕುಲಪತಿಗಳಾದ ಶ್ರೀ. ಚಂದ್ರಶೇಖರ ಕಂಬಾರ ಅವರಿಗೆ, ಹಾಗೂ ಶ್ರೀ. ಕೆ.ವಿ. ನಾರಾಯಣ ಅವರಿಗೆ,

ಅಧ್ಯಯನಕ್ಕೆ ಗಟ್ಟಿಯಾದ ತಳಪಾಯ ಹಾಕಿಕೊಟ್ಟು ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸಿದ ಪೂಜ್ಯನೀಯ ಗುರುಗಳಾದ ಶ್ರೀ. ಓ.ಎಲ್. ನಾಗಭೂಷಣ ಸ್ವಾಮಿ ಅವರಿಗೆ, ಅಮೂಲ್ಯ ಮಾಹಿತಿಗಳನ್ನು ಹಾಗೂ ಅನೇಕ ಕೃತಿಗಳನ್ನು ಓದಲು ನೀಡಿ, ನನ್ನ ವ್ಯಾಸಂಗದ ಹಂತಗಳನ್ನು ಕಾಳಜಿ ವಹಿಸಿ ವಿಚಾರಿಸುತ್ತಾ, ಚರ್ಚಿಸುತ್ತ, ಅಕ್ಕರೆಯಿಂದ ಕಂಡಂತಹ ಗುರುಗಳಾದ ಡಾ॥ ಹೆಚ್.ಎಸ್. ರಾಘವೇಂದ್ರರಾವ್, ಡಾ॥ ರಹಮತ ತರಿಕೆರೆ, ಡಾ॥ ಟಿ.ಎಸ್. ಸತ್ಯನಾಥ್, ಡಾ॥ ಪುರುಷೋತ್ತಮ ಬಿಳಿಮಲೆ, ಶ್ರೀ. ಮಲ್ಲೇಪುರಂ. ಜಿ. ವೆಂಕಟೇಶ್, ಡಾ. ಶ್ರೀಮತಿ, ಶ್ರೀ. ಹಿ. ಚಿ. ಬೋರಲಿಂಗಯ್ಯ ಶ್ರೀ ವಾಸುಕಿ, ಶ್ರೀ ಪುಟ್ಟಯ್ಯ ರವರಿಗೆ, ಅಮೂಲ್ಯವಾದ ಗ್ರಂಥಗಳನ್ನು ಒದಗಿಸಿಕೊಟ್ಟ ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೆ,

ನನ್ನ ಅಧ್ಯಯನದ ವಿಚಾರಗಳನ್ನು ಹಂಚಿಕೊಂಡ ಮಿತ್ರರಾದ ಶಿವಕುಮಾರ, ಗುರುರಾಜ, ಕಾಶೀನಾಥ, ಜಗದೀಶ ಮಠದ, ಮಂಜುಳ ರವರಿಗೆ,

ಸದಾಕಾಲ ನನ್ನ ಅಭ್ಯುದಯವನ್ನೇ ಬಯಸುವ, ಹಾಗೂ ನನ್ನ ವಿದ್ಯಾಭ್ಯಾಸದ ಬೆನ್ನೆಲುಬಾಗಿರುವ ನನ್ನ ಪ್ರೀತಿಯ ತಂದೆ-ತಾಯಿ ಮತ್ತು ಲತಾ ಮಾಮಿ, ಮಾಮರವರಿಗೂ,

ದೂರದಲ್ಲಿದ್ದು ನನಗೆ ಪ್ರೋತ್ಸಾಹ ಹಾಗೂ ಜೀವಂತಿಕೆಯನ್ನು ತುಂಬುತ್ತಿದ್ದ ಪ್ರೀತಿಯ ತಮ್ಮಂದಿರಿಗೆ, ಜಿ. ರವಿ, ಕುಮಾರಿ. ರೇಖಾ, ದೇಸಾಯಿ ಅವರಿಗೆ,

ಕಡಿಮೆ ಸಮಯದಲ್ಲಿ ಅಚ್ಚುಕಟ್ಟಾಗಿ ಪ್ರಿಂಟ್ ಮಾಡಿಕೊಟ್ಟ ಸ್ಫೂರ್ತಿ ರವರಿಗೂ ಬೈಂಡ್ ಮಾಡಿಕೊಟ್ಟ **ದತ್ತಾತ್ರೇಯ** ಪ್ರಿಂಟರ್ಸ್ ರವರಿಗೂ ನನ್ನ ಆತ್ಮೀಯ ಕೃತಜ್ಞತೆಗಳು.

ದಿನಾಂಕ: ೨೦।೧೦।೧೯೯೫
ಸ್ಥಳ : ವಿದ್ಯಾರಣ್ಯ

ಸವಿತಾ ಕುಲಕರ್ಣಿ
ಸಂಶೋಧನಾ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

: ಪರಿವಿಡಿ :

## ಪ್ರಸ್ತಾವನೆ

## ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### (ಅ) ಉದ್ದೇಶ:

ಕಾವ್ಯ ಮೀಮಾಂಸೆಯೆಂಬುದು ಕಾವ್ಯ ಸ್ವರೂಪ ಮತ್ತು ಕಾವ್ಯ ಪ್ರಕ್ರಿಯೆ ಕುರಿತ ಸಂಕಥನ. ಕವಿ, ಕೃತಿ, ಓದುಗ, ಲೋಕಗಳ ಸ್ವರೂಪ ಮತ್ತು ಅವುಗಳ ನಡುವಿನ ಅಂತರ್ ಸಂಬಂಧದ ಸ್ವರೂಪ ಕುರಿತು ವಿಶ್ಲೇಷಿಸುತ್ತದೆ. ಮೌಲ್ಯಮಾಪನಕ್ಕೆ ತನ್ನದೇ ಆದ ಭಾಷೆ, ಪರಿಭಾಷೆಗಳನ್ನು ರೂಪಿಸಿಕೊಂಡು ಸಂಸ್ಕೃತ, ಗ್ರೀಕ್ ಭಾಷೆಗಳಲ್ಲಿ ಪ್ರತ್ಯೇಕ ಶಿಸ್ತಾಗಿ ಬೆಳೆಯಿತು. ಆದರೆ ಕಾವ್ಯಾಸ್ವಾದನೆ, ಕಾವ್ಯ ಪ್ರಯೋಗ ಭಿನ್ನ ರೀತಿಯಲ್ಲಿ ಬೇರೆ ಭಾಷೆಗಳಲ್ಲಿ ಬೆಳೆದವು.

ಕನ್ನಡವು ಸಂಸ್ಕೃತ ಕಾವ್ಯ ಮೀಮಾಂಸೆಯ ಹಾದಿಯಲ್ಲಿ ನಡೆದರೂ ಸಂಸ್ಕೃತ ಕಾವ್ಯ ಮೀಮಾಂಸೆಗಿಂತ, ಆ ಕಾವ್ಯ ಶಾಸ್ತ್ರಗಳಿಗಿಂತ ಭಿನ್ನವಾದ ನಿಲುವುಗಳನ್ನು ಅಭಿವ್ಯಕ್ತಿಸಿದೆ. ಹೀಗೆ ಅಭಿವ್ಯಕ್ತಗೊಂಡಿರುವ ಕಾವ್ಯ ಮೀಮಾಂಸೆಯಲ್ಲದ ಆದರೆ ಮುಖ್ಯವಾದ ಕಾವ್ಯ ತತ್ತ್ವ ನಿರೂಪಿಸುವ ಕನ್ನಡದ್ದೇ ಆದ ಸಂಕಥನವನ್ನು ಇಂದು ರೂಪಿಸಿಕೊಳ್ಳುವುದು ಮುಖ್ಯ ಕೆಲಸವಾಗಿದ್ದು ಅಂಥ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

(ಆ) ಅಧ್ಯಯನದ ವ್ಯಾಪ್ತಿ:

---

ಸಂಸ್ಕೃತ-ಗ್ರೀಕ್ ಭಾಷೆಯಲ್ಲಿ ಕಾವ್ಯ ಮೀಮಾಂಸೆ ಕುರಿತ ಚಿಂತನೆಗಳು ಬೆಳೆದು ಬಂದಿದ್ದರೂ ಇತ್ತೀಚಿನ ವರ್ಷಗಳಲ್ಲಿ ಕಾವ್ಯ ತತ್ವದ ಚಿಂತನೆಗಳು ತತ್ವಶಾಸ್ತ್ರ, ಭೌತಶಾಸ್ತ್ರ, ರಾಜ್ಯಶಾಸ್ತ್ರ, ಮನಃಶಾಸ್ತ್ರ, ಸಮಾಜಶಾಸ್ತ್ರ, ಭಾಷಾ ವಿಜ್ಞಾನದ ಒಳನೋಟಗಳನ್ನೆಲ್ಲ ಅಳವಡಿಸಿಕೊಂಡು ಹೆಚ್ಚು ಸೂಕ್ಷ್ಮಗೊಳ್ಳುತ್ತದೆ. ಹೀಗೆ ಅಂತರ್ ಶಿಸ್ತೀಯ ನಿಲುವುಗಳಲ್ಲಿ ಕಾವ್ಯ ಮೀಮಾಂಸೆಯ ವಿಚಾರಗಳನ್ನೊಳಗೊಂಡಂತೆ ರೂಪಿತವಾಗಿರುವ ಕೃತಿಗಳನ್ನು, ಲೇಖನಗಳನ್ನು ಅಧ್ಯಯನದ ದೃಷ್ಟಿಯಿಂದ ಇಲ್ಲಿ ಬಳಸಿಕೊಳ್ಳಲಾಗಿದೆ.

(ಇ) ಅಧ್ಯಯನದ ಸ್ವರೂಪ:

---

ಈ ಅಧ್ಯಯನದಲ್ಲಿ ನಾಲ್ಕು ಅಧ್ಯಾಯಗಳಿವೆ.

೧- ಕನ್ನಡ ಕಾವ್ಯ ಮೀಮಾಂಸೆಯ ಆಸಕ್ತಿಗಳು:- ಕನ್ನಡ ಕಾವ್ಯ ಮೀಮಾಂಸೆ ಎಂಬ ಪರಿಕಲ್ಪನೆ ಬೆಳೆದುಬಂದಿರುವ ಬಗೆ ಹಾಗು ಕಾವ್ಯ ಮೀಮಾಂಸೆಯ ಆಸಕ್ತಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

೨- ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆ ಎಂಬ ಪರಿಕಲ್ಪನೆ ಕುರಿತು ಈ ವರೆಗೆ ನಡೆದಿರುವ ಕನ್ನಡ ಕವಿಗಳ ಹಾಗು ವಿಮರ್ಶಕರ ಅಧ್ಯಯನಗಳನ್ನಿಲ್ಲಿ ಸಮೀಕ್ಷಿಸಲಾಗಿದೆ.

೩- ಕನ್ನಡ ಕಾವ್ಯ ಮೀಮಾಂಸೆಯ ಲಕ್ಷಣಗಳನ್ನು ಕುರಿತು ಅಭಿವ್ಯಕ್ತಿಸಿರುವ ವಚನ ಪೂರ್ವದ ಹಾಗು ವಚನ ಯುಗದ ನಂತರದ ಕವಿಗಳ ಅಭಿಪ್ರಾಯಗಳನ್ನು ಒಳಗೊಂಡಿರುವ ಲೇಖನ, ಕೃತಿಗಳನ್ನು ಗಮನಿಸಲಾಗಿದೆ.

೪- ವಚನಕಾರರು ಸೃಷ್ಟಿಸಿರುವ ಪರಿಕಲ್ಪನೆಗಳಾದ ನಿಃಶಬ್ದ, ಉಲಿ, ನುಡಿ, ಭಾಷೆ, ಶಬ್ದಗಳ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯ ಮುಖ್ಯ ಪ್ರಶ್ನೆಗಳ ಸ್ವರೂಪವನ್ನು ವಿಶ್ಲೇಷಿಸುತ್ತ ಕನ್ನಡ ಕಾವ್ಯ ಮೀಮಾಂಸೆಯನ್ನು ರೂಪಿಸುವ ಪ್ರಯತ್ನವಿಲ್ಲಿದೆ.

## ಈ- ಪ್ರಬಂಧ ರಚನೆ:-

### ಆಕರಗಳ ಸಂಗ್ರಹಣೆ:-

ವಚನಗಳಲ್ಲಿ ಕಾವ್ಯ ಮೀಮಾಂಸೆಯನ್ನು ಆಧಾರವಾಗಿಟ್ಟುಕೊಂಡು ರೂಪಿತವಾಗಿರುವ ವಿಮರ್ಶಾ ಕೃತಿಗಳನ್ನು ಹಾಗು ವಚನ ಪೂರ್ವದ ಕಾವ್ಯಗಳನ್ನು ಆಧಾರವಾಗಿಟ್ಟುಕೊಂಡು ಮತ್ತು ಕಾವ್ಯಮೀಮಾಂಸೆಯ ಪರಿಕಲ್ಪನೆಗಳನ್ನು ಆಧಾರವಾಗಿಟ್ಟುಕೊಂಡು ರಚನೆಯಾಗಿರುವ ಕೃತಿಗಳನ್ನು, ಬಿಡಿ ಲೇಖನಗಳನ್ನು ಮುಖ್ಯವಾಗಿ ಗಮನಿಸಲಾಗಿದೆ. ವಿವಿಧ ವಚನಕಾರರ ಪ್ರಕಟಿತ ವಚನಗಳು ಪ್ರಾಥಮಿಕ ಆಕರಗಳಾಗಿವೆ.

### ಉಲ್ಲೇಖನಗಳನ್ನು ನೀಡುವ ಕ್ರಮ:

(೧) ಪ್ರಬಂಧ ರಚನೆಯಲ್ಲಿ ಅವಶ್ಯಕವಾದಕಡೆ ಉಲ್ಲೇಖನಗಳನ್ನು, ವಚನಗಳನ್ನು ಬಳಸಿಕೊಳ್ಳಲಾಗಿದೆ. ಪ್ರತಿಯೊಂದು ಉಲ್ಲೇಖ ಹಾಗು ವಚನಗಳಿಗೆ ಸಂಖ್ಯೆಯನ್ನು ನೀಡಿ, ಪ್ರತಿ ಅಧ್ಯಯನದ ಕೊನೆಯಲ್ಲಿ ಉಲ್ಲೇಖಿಸಿದ ವಚನಕಾರರ ಹೆಸರು, ಸಂಪಾದಕರ ಮತ್ತು ಸಂಪಾದಿತ ಕೃತಿಗಳನ್ನು ತಿಳಿಸಲಾಗಿದೆ. ಹಾಗೂ ಉಲ್ಲೇಖ ಬರುವ ಪುಟ ಸಂಖ್ಯೆಯನ್ನು ನೀಡಲಾಗಿದೆ. ಟಿಪ್ಪಣಿಗಳನ್ನು ಸಹ ಇದೇ ಮಾದರಿಯಲ್ಲಿ ನೀಡಲಾಗಿದೆ.

ಅಧ್ಯಾಯ: ೧.

## ಕಾವ್ಯ ಮೀಮಾಂಸೆಯ ಮುಖ್ಯ ಆಸಕ್ತಿಗಳು

ಪ್ರಸ್ತುತ ಅಧ್ಯಯನದಲ್ಲಿ ಅಲ್ಲಮ, ಅಕ್ಕಮಹಾದೇವಿ, ಬಸವಣ್ಣ ಮುಂತಾದ ಕನ್ನಡದ ಕೆಲವು ಪ್ರಮುಖ ವಚನಕಾರರಲ್ಲಿ ವ್ಯಕ್ತವಾಗಿರುವ ಕಾವ್ಯಮೀಮಾಂಸೆಯ ಅಂಶಗಳನ್ನು ಒಂದೆಡೆ ಕ್ರೋಢೀಕರಿಸುವ ಪ್ರಯತ್ನ ಮಾಡಲಾಗಿದೆ. ಈ ಕೆಲಸ ಯಾಕೆ ಮುಖ್ಯ, ಹಾಗೂ ಇಂಥ ಪ್ರಯತ್ನಗಳಿಂದ ಆಗುವ ಉಪಯೋಗವೇನು, ಎಂಬ ಪ್ರಶ್ನೆಗಳು ಸಹಜವಾಗಿ ಮೂಡುತ್ತವೆ.

ಕನ್ನಡ ಕಾವ್ಯವನ್ನು ಅರ್ಥೈಸಿಕೊಳ್ಳಲು ಕನ್ನಡ ಕಾವ್ಯ ಸ್ವರೂಪವನ್ನು ಕುರಿತು ಚಿಂತಿಸಲು ಸಂಸ್ಕೃತ ಹಾಗೂ ಪಾಶ್ಚಾತ್ಯ ಮೀಮಾಂಸೆಯ ಆಕರಗಳನ್ನೇ ಪ್ರಮುಖವಾಗಿ ಬಳಸುತ್ತಿರುವುದನ್ನು ಕಾಣುತ್ತಿದ್ದೇವೆ. ಇದಕ್ಕೆ ಪ್ರತಿಯಾಗಿ ಕಾವ್ಯ ಮೀಮಾಂಸೆಯ ಕನ್ನಡ ಆಕರಗಳನ್ನು ಕಂಡು ಕೊಳ್ಳಲು ಸಾಧ್ಯವಾಗಬಹುದೆಂದೂ ಹಾಗೂ ಆ ಆಕರಗಳಿಂದ ಕನ್ನಡ ಕಾವ್ಯ ಮೀಮಾಂಸೆಯ ಹಂದರವೊಂದನ್ನು ರೂಪಿಸಿಕೊಳ್ಳಲು ಸಾಧ್ಯವಿದೆಯೆಂದೂ ತೋರುತ್ತದೆ. ಇಂಥ ನಂಬಿಕೆಯು ಈ ಅಧ್ಯಯನದ ಮುಖ್ಯ ಪ್ರೇರಣೆಯಾಗಿದೆ. ಕನ್ನಡ ಕವಿಗಳು ಭಾರತೀಯ ಕಾವ್ಯ ಮೀಮಾಂಸೆಯ ತತ್ತ್ವಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ ಹಾಗು ಹೇಗೆ ಭಿನ್ನರಾಗುತ್ತಾರೆ ಎಂಬುದನ್ನ ಗುರುತಿಸುವುದೂ ಕೂಡಾ ಈ ಅಧ್ಯಯನದ ಇನ್ನೊಂದು ಮುಖ್ಯ ಆಸಕ್ತಿಯಾಗಿದೆ.

ವಚನಗಳಿಂದ ಕಾವ್ಯ ಮೀಮಾಂಸೆಯ ಆಶಯಗಳನ್ನು ರೂಪಿಸಿಕೊಳ್ಳುವುದಕ್ಕೆ ಮುನ್ನ ಈ ಅಧ್ಯಯನವು ಕಾವ್ಯಮೀಮಾಂಸೆ ಎಂಬ ಪರಿಕಲ್ಪನೆಯ ಬಗೆಗೆ ಹೊಂದಿರುವ ಕೆಲವು ಮುಖ್ಯ ಧೋರಣೆಗಳನ್ನು ಸ್ಪಷ್ಟಗೊಳಿಸುವುದು ಅಗತ್ಯವಾಗಿದೆ.

ಮನುಷ್ಯ ತನ್ನನ್ನು ತಾನು ಹಲವಾರು ಬಗೆಯಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳುತ್ತಾನೆ. ಅದರಲ್ಲಿ ಕಾವ್ಯ ಒಂದು ಬಗೆ. ಈ ಕಾವ್ಯ ಸ್ವರೂಪ ಕುರಿತ ಚರ್ಚೆ, ಚಿಂತನೆಗಳೇ ಕಾವ್ಯ ಮೀಮಾಂಸೆಯ ವಸ್ತು. ಕಾವ್ಯ ಮೀಮಾಂಸೆಯು ಕಾವ್ಯದ ಸ್ವರೂಪ, ತತ್ತ್ವ ಮತ್ತು ಮೌಲ್ಯಮಾಪನಗಳನ್ನು ಕುರಿತ ಅಧ್ಯಯನದ ಶಿಸ್ತು ಆಗಿದೆ. ಕಾವ್ಯದ ಪರಿಕರ, ಪರಿಭಾಷೆ, ಅಭಿವ್ಯಕ್ತಿ ಸ್ವರೂಪದ ಸಮಸ್ಯೆ ಕುರಿತಂತೆ ಸಮಾಲೋಚನೆ ಕೈಗೊಳ್ಳುತ್ತದೆ. ಹಾಗೂ ಕಾವ್ಯ ಪ್ರಪಂಚದ ಮುಖ್ಯ ಆಸಕ್ತಿ ಕೇಂದ್ರಗಳಾದ ಕವಿ, ಸಹೃದಯ ಮತ್ತು ಜಗತ್ತನ್ನು ಕುರಿತು ಚಿಂತಿಸುತ್ತದೆ.

ಎಲ್ಲಾ ಕಾವ್ಯವು ತನ್ನ ಭಾಷೆ ಪರಿಸರ ಮತ್ತು ಸಂಸ್ಕೃತಿಗಳಿಗೆ ಬದ್ಧವಾಗಿರುತ್ತದೆ. ಹಾಗೆಯೇ ಯಾವುದೇ ಕಾವ್ಯ ಮೀಮಾಂಸೆ ತನ್ನ ಪರಿಸರದ ಭಾಷೆಯಲ್ಲಿ ಸೃಷ್ಟಿಯಾದ ಕಾವ್ಯದ ಮೊತ್ತವನ್ನು ಅನುಲಕ್ಷಿಸಿ ಸೃಷ್ಟಿಗೊಳ್ಳುತ್ತದೆ. ಆದ್ದರಿಂದ ಒಂದೊಂದು ಸಂಸ್ಕೃತಿಯ ಕಾವ್ಯ ಮೀಮಾಂಸೆಯೂ ಆಯಾ ಸಂಸ್ಕೃತಿಗೆ ವಿಶಿಷ್ಟವಾಗಿರುತ್ತದೆ. ಆದರೆ ಭಾಷೆ ಅನ್ನುವುದು ಮನುಷ್ಯತ್ವದ ಮುಖ್ಯ ಲಕ್ಷಣವಾದ್ದರಿಂದ ಯಾವುದೇ ಭಾಷೆಯಲ್ಲಿ ಸೃಷ್ಟಿಯಾಗುವ ಕಾವ್ಯ ಕೂಡಾ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೊಂದಿರುತ್ತದೆ.

ಚಾಮ್‌ಸ್ಕಿಯಂಥ ಭಾಷಾಶಾಸ್ತ್ರಜ್ಞರು ಭಾಷೆಯ ವಿಶ್ವಾತ್ಮಕತೆಯ ಬಗ್ಗೆ ಸಾಕಷ್ಟು ಚಿಂತನೆ ನಡೆಸಿದ್ದಾರೆ. ವಾಕ್ಯಗಳ ನಿರ್ಮಾಣ ಮತ್ತು ಅರ್ಥವಾಚಕತೆಯನ್ನು ಸಾಧಿಸುವ ಬಗೆಗಳಲ್ಲಿ ವಿಶ್ವಾತ್ಮಕ ಅಂಶಗಳನ್ನು ಗುರುತಿಸಲಾಗಿದೆ. ಪ್ರತಿಯೊಂದು ಭಾಷೆಯೂ 'ಭಾಷೆಯ' ಸಾಧ್ಯತೆಗಳ ಕೆಲವು ಅಂಶಗಳನ್ನು ಅಳವಡಿಸಿಕೊಂಡು ವಿಶಿಷ್ಟವಾಗುತ್ತದೆ ಎಂಬ ಒಂದು ತೀರ್ಮಾನವೂ ಲಭಿಸಿದೆ. ಕಾವ್ಯದ ಹಾಗೆಯೇ ಕಾವ್ಯ ಸ್ವರೂಪದ ಚಿಂತನೆ ಕೂಡ ವಿಶಿಷ್ಟ ವಿಶ್ವಾತ್ಮಕ ಅಂಶಗಳನ್ನು ಒಳಗೊಂಡಿದೆ. ಉದಾಹರಣೆಗೆ ಕಾವ್ಯವಾಚನ ಮಾಡುವಾಗ ಅರ್ಥಕ್ಕೆ ಭಂಗ ಬಾರದ ಹಾಗೆ ನಿಲುಗಡೆಯನ್ನು ಎಲ್ಲಿ ಹೇಗೆ ಒದಗಿಸಿಕೊಳ್ಳಬೇಕು ಎಂಬ ಅಂಶ ವಿಶ್ವಾತ್ಮಕವಾದದ್ದು. ಯಾವುದೇ ಎರಡು ವಸ್ತು ಅಥವಾ

ಸಂಗತಿಗಳನ್ನು ಹೋಲಿಸುವ ವಿವಿಧ ಬಗೆಗಳು, ಒಂದು ಕವನದ ಸಂದರ್ಭದಲ್ಲಿ ಪದ ಒಂದಕ್ಕೆ ಇರುವ ಅನೇಕ ಅರ್ಥ ಸಾಧ್ಯತೆಗಳು ಮುಂತಾದ ಸಂಗತಿಗಳು ಯಾವುದೇ ಭಾಷೆಯ ಕಾವ್ಯಕ್ಕೆ ಅನ್ವಯಿಸುವಂಥವು. ''ಉಪಮೆ, ರೂಪಕ, ಶ್ಲೇಷೆಯಂತ ಭಾಷಿಕ ಸಾಧ್ಯತೆಗಳನ್ನು ಬಳಸಿಕೊಳ್ಳದ ಭಾಷೆ ಮತ್ತು ಕಾವ್ಯ ಇಲ್ಲವೇ ಇಲ್ಲ'' (ಫ್ರೌಲರ್-೧೯೮೦) ಎಂಬಂತಹ ಮಾತುಗಳನ್ನು ಗಮನಿಸಬಹುದು. ಆದರೆ ಕಾವ್ಯದ ಬಾಹ್ಯ ಸ್ವರೂಪ, ಅದರ ಉದ್ದೇಶ, ಮೌಲ್ಯ ಮಾಪನಕ್ಕೆ ಆಧಾರವಾಗಿ ಬಳಸಿಕೊಳ್ಳುವ ಸಂಗತಿಗಳು, ಕಾವ್ಯ ಪರಿಣಾಮದ ಬಗ್ಗೆ ತೆಗೆದುಕೊಳ್ಳಲಾಗುವ ನಿಲುವುಗಳು ಸಂಸ್ಕೃತಿಯಿಂದ ಸಂಸ್ಕೃತಿಗೆ ಕಾಲದಿಂದ ಕಾಲಕ್ಕೆ ಭಿನ್ನವಾಗಿರುತ್ತವೆ.

ಮನುಷ್ಯನ ಒಟ್ಟು ಜ್ಞಾನರಾಶಿಯಲ್ಲಿ ಕಾವ್ಯ ಮೀಮಾಂಸೆಗೆ ಯಾವ ಸ್ಥಾನ ನೀಡ ಬೇಕು? ಮತ್ತು ಕಾವ್ಯ ಮೀಮಾಂಸೆಗೂ ಇತರ ಜ್ಞಾನ ಶಾಖೆಗಳಿಗೂ ಇರುವ ಸಂಬಂಧ ಯಾವ ಬಗೆಯದು ಎಂಬ ಬಗ್ಗೆ ಸಂಸ್ಕೃತ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿ ಬೇರೆ ಬೇರೆಯದೇ ಆದ ಧೋರಣೆಗಳು ಕಾಣುತ್ತವೆ.

''ಲೇಖನ,ಭಾಷಣ,ಉಕ್ತಿ ಚಮತ್ಕಾರಗಳನ್ನು ವಿಭಜನೆ ಮಾಡುವ ಅಲಂಕಾರ ಶಾಸ್ತ್ರ, ಕಾವ್ಯದ ತಿರುಳನ್ನು ಅದರ ನಿರ್ಮಾಣ ಕ್ರಮವನ್ನು ನಿರೂಪಿಸುವ ಕಾವ್ಯ ಮೀಮಾಂಸೆ, ಎಲ್ಲ ಲಲಿತಕಲೆಗಳಿಗೂ ಸಮಾನವಾಗಿರುವ ಸೌಂದರ್ಯ ಸ್ವರೂಪವನ್ನು ವಿಚಾರ ಮಾಡುವ ಸೌಂದರ್ಯ ಮೀಮಾಂಸೆ [RHETO RICS, POETICS, AESTHETICS] ಮೂರು ಶಾಸ್ತ್ರಗಳು ಪಾಶ್ಚಾತ್ಯರಲ್ಲಿ ಬೇರೆ ಬೇರೆಯಾಗಿ ಬೆಳೆದು ಬಂದಿವೆ. ಹಾಗು ಕೊನೆಯದು ತತ್ತ್ವಶಾಸ್ತ್ರದ ಅಂಗವಾಗಿ ಬರುತ್ತದೆ. ನಮ್ಮ ದೇಶದಲ್ಲಿ ಅಲಂಕಾರವಿಭಜನೆ,ಕಾವ್ಯಮೀಮಾಂಸೆ, ಸೌಂದರ್ಯದರ್ಶನ ಬೇರೆ ಬೇರೆ ಶಾಸ್ತ್ರಗಳೆಂದು ಭಾವಿಸಿ ನಿರೂಪಿಸುವ ಪದ್ಧತಿ ಬರಲಿಲ್ಲ. ಕಾವ್ಯ ತತ್ತ್ವ ಸಮಾಲೋಚನೆಯ ಅಂಗವಾಗಿಯೇ ಅನುಪ್ರಾಸ, ಉಪಮೆ ಮೊದಲಾದ ಅಲಂಕಾರಗಳ ವ್ಯವಸ್ಥೆ ನಡೆಯಿತು. ಕಾವ್ಯದಲ್ಲಿ ರಮಣೀಯತೆಯುಂಟು ಮಾಡುವ ಅಂಶಗಳೆಲ್ಲವನ್ನು ಅಲಂಕಾರಗಳೆಂದು ಕರೆದರು. ಶಬ್ದಾರ್ಥಾಲಂಕಾರವನ್ನು ಮುಖ್ಯವಾಗಿ ಗಮನಿಸಿದ್ದು ಸೌಂದರ್ಯವೆಂಬ ವಿಶಾಲಾರ್ಥದಲ್ಲಿಯೇ ಚಿಂತನೆಗಳಿದ್ದವು. ಆದ್ದರಿಂದಲೇ ಅಲಂಕಾರ ಶಾಸ್ತ್ರ, ಕಾವ್ಯ ಮೀಮಾಂಸೆ ಈ ಎರಡೂ ನಮ್ಮಲ್ಲಿ ಸಮಾನಾರ್ಥಕ ಶಬ್ದಗಳಾಗಿ ನಿಂತಿವೆ.'' (ತೀ.ನಂ.ಶ್ರೀ.:೧೯೬೩:ಪು.ಸಂ.೬ರಿಂದ ೭)

ಕಾವ್ಯವನ್ನು ಕುರಿತಂತೆ ತಾಳುವ ನಿಲುವುಗಳ ಆಧಾರದ ಮೇಲೆ ಕಾವ್ಯಮೀಮಾಂಸೆಯನ್ನು ವಿವಿಧ ರೀತಿಗಳಲ್ಲಿ ವರ್ಗೀಕರಿಸಬಹುದು. ಸಾಂಪ್ರದಾಯಿಕವಾಗಿ ಕಾವ್ಯ ಮೀಮಾಂಸೆಯ ವಿವಿಧ ಪ್ರಸ್ಥಾನಗಳನ್ನು ಕಾಲಾನುಕ್ರಮದಲ್ಲಿ ಗುರುತಿಸುವುದುಂಟು. ಈ ಮಾದರಿಯಲ್ಲಿ ಚಾರಿತ್ರಿಕ ಕಾಲಾನುಕ್ರಮಣಿಕೆ ನಿರ್ಣಾಯಕ ಅಂಶವಾಗಿರುತ್ತದೆ. ಇದಕ್ಕೆ ಪ್ರತಿಯಾಗಿ ಆಧುನಿಕ ರೀತಿಯಲ್ಲಿ ಯಾವುದೇ ಕಾಲದ ಕಾವ್ಯ ಮೀಮಾಂಸೆಯ ಪ್ರಮುಖ ಆಸಕ್ತಿ ಕೇಂದ್ರವನ್ನು ಗಮನದಲ್ಲಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸಬಹುದು. ಮೂರನೆಯದಾಗಿ ಭಾಷಿಕ ಸಂವಹನೆಯ ಮಾದರಿಯನ್ನು ಆಧಾರವಾಗಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸುವ ಸಾಧ್ಯತೆಯೂ ಇದೆ.

ಅಲಂಕಾರ,ರೀತಿ,ರಸ, ಧ್ವನಿ ಪ್ರಸ್ಥಾನಗಳ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯನ್ನು ಗ್ರಹಿಸುವುದು ಸಾಂಪ್ರದಾಯಿಕವಾಗಿದೆ. ಒಂದೇ ಸಂಸ್ಕೃತಿಯಲ್ಲಿ ಕಾಲದಿಂದ ಕಾಲಕ್ಕೆ ನಿಲುವುಗಳು ಬದಲಾದಂತೆ ಬೇರೆ ಬೇರೆ ಪ್ರಸ್ಥಾನಗಳು ಹುಟ್ಟಿಕೊಳ್ಳುತ್ತವೆ. ಕಾವ್ಯ ಸ್ವರೂಪ ಮತ್ತು ಕಾವ್ಯದ ಅಂತಸ್ಸತ್ವ ಕುರಿತ ವಿಚಾರಗಳು, ನಿಲುವುಗಳು ಬದಲಾದದ್ದೇ ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ವಿಭಿನ್ನ ಪ್ರಸ್ಥಾನಗಳು ಹುಟ್ಟಿಕೊಳ್ಳಲು ಕಾರಣವಾಗಿದೆ. ತೀ. ನಂ. ಶ್ರೀ., ಕೆ. ಕೃಷ್ಣಮೂರ್ತಿ, ರಾಘವನ್ ಮುಂತಾದವರು ಈ ಮಾದರಿಯ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯ ವಿಚಾರಗಳನ್ನು ಕಟ್ಟಿಕೊಡುತ್ತಾರೆ.

ಕಾವ್ಯ ಮೀಮಾಂಸೆ ಕಾವ್ಯ ಪ್ರಕ್ರಿಯೆಯ ಯಾವ ಅಂಶಕ್ಕೆ ಅವಧಾರಣೆ ನೀಡಿದೆ ಎಂಬುದನ್ನು ಆಧರಿಸಿ ಕಾವ್ಯ ಮೀಮಾಂಸೆಯನ್ನು ನಾಲ್ಕು ಪ್ರಮುಖ ಶಾಖೆಗಳಾಗಿ ವಿಂಗಡಿಸಿರುವುದನ್ನು ಕಾಣಬಹುದು. ಎಂ. ಹೆಚ್. ಅಬ್ರಾಂಸ್ ಮತ್ತು ಅವನ ವಿಚಾರಗಳನ್ನು ಅನುಸರಿಸಿದ ಕೆ.ವಿ. ನಾರಾಯಣರ (ಬೇಂದ್ರೆ ಕಾವ್ಯ ದೃಷ್ಟಿ: ೧೯೮೪) ವಿಚಾರಗಳು ಈ ಬಗೆಯ ವಿಂಗಡಣೆಯ ನಿದರ್ಶನಗಳು. ಕವಿ ಕೇಂದ್ರಿತ, ವಾಚಕ ಕೇಂದ್ರಿತ, ಕೃತಿ ಕೇಂದ್ರಿತ, ಮಾಧ್ಯಮ ಕೇಂದ್ರಿತವೆಂದು ವಿಂಗಡಿಸುವ ಈ ಕ್ರಮ ಚಾರಿತ್ರಿಕ ಕಾಲಕ್ರಮಕ್ಕಿಂತ ಧೋರಣೆಗಳಿಗೆ ಪ್ರಾಮುಖ್ಯ ನೀಡುತ್ತದೆ.

ಕವಿ ಕೇಂದ್ರಿತ ಕಾವ್ಯ ವಿಮರ್ಶೆಯು ಇದು ಕಾವ್ಯ ಪ್ರಕ್ರಿಯೆಯಲ್ಲಿ ಕವಿಗೆ ಪ್ರಮುಖ ಸ್ಥಾನ ನೀಡುತ್ತದೆ. ಕಾವ್ಯವೆಂಬುದು ಕವಿಯ ಕರ್ಮ, ಕಾವ್ಯದ ಅರ್ಥವಂತಿಕೆಯಲ್ಲಿ ಕವಿಯ ಉದ್ದೇಶಕ್ಕೆ ಪ್ರಮುಖಸ್ಥಾನವಿದೆ ಎಂದು ಈ ಬಗೆಯ ಕಾವ್ಯ ವಿಮರ್ಶೆ ನಂಬುತ್ತದೆ. ಪ್ರತಿಭೆ, ಸ್ಫೂರ್ತಿ, ಕಲ್ಪನೆ ಎಂಬ ಪರಿಕಲ್ಪನೆಗಳು ಈ ಬಗೆಯ ಕಾವ್ಯ ವಿಮರ್ಶೆಯಲ್ಲಿ ಪ್ರಮುಖವಾಗಿರುತ್ತವೆ. ಹಾಗು ಕವಿಯ ಮೇಲಾದ ಪ್ರಭಾವ, ಅವನು ಮಾಡಿಕೊಳ್ಳಬೇಕಾಗುವ ಸಿದ್ಧತೆಗಳಿಗೂ ಈ ಬಗೆಯ ಕಾವ್ಯ ವಿಮರ್ಶೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಕವಿಶಿಕ್ಷ, ಕವಿಜಿಹ್ವಾಬಂಧನದಂಥ ಕೃತಿಗಳನ್ನು, ರಾಜಶೇಖರ ಪ್ರತಿಭೆಯನ್ನು ಕುರಿತು ಮಂಡಿಸಿರುವ ವಿಚಾರಗಳನ್ನು ಕವಿ ಕೇಂದ್ರಿತ ಕಾವ್ಯ ವಿಮರ್ಶೆಯ ವಿಚಾರಗಳಿಗೆ ನಿದರ್ಶನಗಳೆಂದು ಭಾವಿಸಬಹುದು. ಓದುಗ ಕೇಂದ್ರಿತ ವಿಮರ್ಶೆಯಲ್ಲಿ ಓದುಗನ ಮೇಲೆ ಕಾವ್ಯದಿಂದುಂಟಾಗುವ ಪರಿಣಾಮಕ್ಕೆ ಮಹತ್ವ ನೀಡಲಾಗುತ್ತದೆ. ಕೃತಿಯ ಅರ್ಥವನ್ನು ಓದುಗ ಸ್ವತಂತ್ರವಾಗಿ ಕಲ್ಪಿಸಿಕೊಳ್ಳಬಲ್ಲ ಎಂಬಂಥ ವಿಚಾರವನ್ನು ಸ್ಪಷ್ಟಪಡಿಸುತ್ತಲೇ ಓದುಗ ಸಂವೇದನೆಯ ಬಗೆಗಳನ್ನು ಪ್ರಮುಖವಾಗಿ ವಿಶ್ಲೇಷಿಸುತ್ತದೆ. ಧ್ವನಿ ಪ್ರಸ್ಥಾನದ ಚರ್ಚೆಗಳಲ್ಲಿ, ರಿಚರ್ಡ್ಸ್ ರನ ಥಾನ್ಸ್ ಥಿಯರಿಗಳಲ್ಲಿ ಓದುಗನ ಪಾತ್ರಕ್ಕೆ ಪ್ರಾಮುಖ್ಯ ಸಂದಿದೆ. ರಾಜಶೇಖರನು ಕಾರಯಿತ್ರೀ - ಭಾವಯಿತ್ರೀ -ಪ್ರತಿಭೆ ಎಂದು ಎರಡು ಭಾಗಮಾಡಿ ವಿಶ್ಲೇಷಿಸುವಾಗಲೂ ಕೂಡ ಓದುಗನ ಮನಸ್ಸಿನ ಪ್ರಕ್ರಿಯೆಗಳನ್ನು ಗುರುತಿಸುತ್ತಾನೆ.

ಕೃತಿ ಕೇಂದ್ರಿತ ವಿಮರ್ಶೆಯು ಕೃತಿಯ ಸ್ವರೂಪ ಕುರಿತು ಹೆಚ್ಚಿನ ಗಮನ ನೀಡುತ್ತದೆ. ಕೃತಿಯ ಒಂದೊಂದು ಅಂಗ ಅಥವಾ ಅಂಶಗಳ ಕುರಿತು ವಿಶ್ಲೇಷಣೆ ಮಾಡುತ್ತದೆ. ಸಂರಚನಾವಾದಿಗಳ ವಿಮರ್ಶೆ ಅಥವಾ ಚಿಂತನೆ ಈ ಬಗೆಯದು. ಅರಿಸ್ಟಾಟಲನ ಕಾವ್ಯವಿಮರ್ಶೆ ಕೃತಿಯೊಂದರ ವಿವಿಧ ಅಂಶಗಳನ್ನೂ ಅವುಗಳ ಪರಸ್ಪರ ಸಂಬಂಧವನ್ನು ಚರ್ಚಿಸುವುದನ್ನು ಗಮನಿಸಬಹುದು.

ಮಾಧ್ಯಮ (ಭಾಷಾ) ಕೇಂದ್ರಿತ ವಿಮರ್ಶೆಯು ಕಾವ್ಯದ ಮಾಧ್ಯಮವಾಗಿರುವ ಭಾಷೆಗೆ ಮುಖ್ಯ ನೀಡುತ್ತದೆ. ಕಾವ್ಯವನ್ನು ಭಾಷೆಯ ಸಾಮರ್ಥ್ಯದ ಒಂದು ಸಾಧ್ಯತೆಯೆಂದು ಗುರುತಿಸುತ್ತದೆ. ಯಾವ ಯಾವ ಬಗೆಯ ಭಾಷೆ ಯಾವ ಬಗೆಯ ಪರಿಣಾಮ ಬೀರುತ್ತದೆ ಎಂದು ಚರ್ಚಿಸುತ್ತಲೇ ಕಾವ್ಯದ ಮೌಲ್ಯ ಮಾಪನಕ್ಕೆ ಕವಿಯ ಭಾಷಾ ಬಳಕೆಯನ್ನೇ ಪ್ರಮುಖ ಮಾನದಂಡವಾಗಿ ಮಾಡಿಕೊಳ್ಳುತ್ತದೆ.

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅಲಂಕಾರ ಪ್ರಸ್ಥಾನ, ರೀತಿ ಪ್ರಸ್ಥಾನಗಳು ಪಾಶ್ಚಾತ್ಯರಲ್ಲಿ ಬಂದಂಥ ಮೌಲ್ಯ ಕೃತಿಪರ ಈ ಹಿನ್ನಲೆಯಲ್ಲಿಯೇ ಮೂಡಿದಂಥವು. ರೋಮನ್ ಜಾಕಬ್‌ಸನ್ ಸಂವಹನೆಯ ಆರು ಬಗೆಗಳನ್ನು, ಹಂತಗಳನ್ನು ಗುರುತಿಸಿ ಕಾವ್ಯ ಮೀಮಾಂಸೆ ಕಟ್ಟಿ ಕೊಡಲು ಪ್ರಯತ್ನಿಸುತ್ತಾನೆ. ೧.- ವಕ್ತೃ, ೨.-ಶ್ರೋತೃ, ೩.-ಮಾಧ್ಯಮ, ೪.-ಸಂಗತಿ, ೫.-ಸಂದರ್ಭ, ೬.-ಕೋಡ್ ಈ ಅಂಶಗಳನ್ನು ಆಧರಿಸಿಯೂ ಕಾವ್ಯಮೀಮಾಂಸೆಯನ್ನು ವರ್ಗೀಕರಿಸಲು ಸಾಧ್ಯವಿದೆ. ಇಂಥ ಎಲ್ಲ ವರ್ಗೀಕರಣಗಳೂ ಕೇವಲ ಅಧ್ಯಯನದ ಅನುಕೂಲಕ್ಕೆಂದೇ ರೂಪಗಳ್ಳುವಂಥವು. ಯಾವುದೇ ಕಾವ್ಯಮೀಮಾಂಸೆ ಶುದ್ಧಾಂಗವಾಗಿ ಯಾವುದಾದರೊಂದು ಮಾತ್ರವೇ ಆಗಿರುವುದು ಸಾಧ್ಯವಿಲ್ಲ ಎಂಬ ಮಾತನ್ನು ಮರೆಯುವಂತಿಲ್ಲ.

ಕಾವ್ಯ ಮೀಮಾಂಸೆ ಒಂದು ಶಿಸ್ತಾಗಿ ಬೆಳೆಯುವಾಗ ಎರಡು ಪ್ರಮುಖವಾದ ಧೋರಣೆಗಳ ಒಳಗೊಂಡಿರುವುದು ಕಾಣಬಹುದು. ಒಟ್ಟು ಕಾವ್ಯವನ್ನು ಅನುಕರಣೆ ಎಂದು ನೋಡುವ ದೃಷ್ಟಿಕೋನ ಮತ್ತೊಂದು ಕಾವ್ಯ ಅನುಕರಣೆಯಲ್ಲಿ ಸ್ವಂತವಾದ ಪ್ರತಿಭೆಯನ್ನು ಹೊಂದಿರುವ ವಾಸ್ತವವೆಂದು ನೋಡುವುದು.

ಕಾವ್ಯ ಮೀಮಾಂಸೆ ಸತ್ಯ ಮತ್ತು ವಾಸ್ತವಗಳ ಸ್ವರೂಪವನ್ನು ತನ್ನದೇ ಆದ ರೀತಿಯಲ್ಲಿ ವಿವರಿಸಲು, ಗ್ರಹಿಸಲು ಪ್ರಯತ್ನಿಸುತ್ತದೆ. ಹಾಗಾಗಿ ಇದು ತತ್ತ್ವಶಾಸ್ತ್ರದ ಒಂದು ಭಾಗವಾಗಿರುತ್ತದೆ. ಹಾಗು ಇದು ಪ್ರತ್ಯೇಕ ಸಂಕಥನ ಅಥವಾ ಶಾಸ್ತ್ರವಾಗಿ ಬೆಳೆಯುತ್ತ ತನ್ನದೇ ಆದ ಪಾರಿಭಾಷಿಕ ಸಮೂಹ ಬೆಳೆಸಿ ಕೊಳ್ಳುತ್ತದೆ ಮತ್ತು ತನ್ನ ವಿಚಾರ ಮಂಡನೆಯ ವಿಧಾನಗಳನ್ನು ಬೆಳೆಸಿಕೊಳ್ಳುತ್ತದೆ. ಉದಾಹರಣೆಗೆ ಸಂಸ್ಕೃತ ಕಾವ್ಯ ಮೀಮಾಂಸೆಯು ತನ್ನ ಲಕ್ಷಣ ನಿರೂಪಣೆಯನ್ನು ನಿದರ್ಶನ, ಪೂರ್ವ ಪಕ್ಷದ ವಾದದ ಮಂಡನೆಗಳ ಕುರಿತಂತೆ ತನ್ನದೇ ಆದ ಪದ್ಧತಿ ಬೆಳೆಸಿ ಕೊಂಡಿರುವುದನ್ನು ಕಾಣಬಹುದು. ಹೀಗೆ ಯಾವುದೇ ಅಧ್ಯಯನದ ಶಿಸ್ತು ತನ್ನದೇ ಆದ ಪರಿಷ್ಕೃತವಾದ ಭಾಷೆಯನ್ನು ಬೆಳೆಸಿ ಕೊಂಡಾಗ ಅದನ್ನ ''ಅಧಿಭಾಷೆ'' ಅಥವಾ ''ಮೆಟಾಲಾಂಗ್ವೇಜ್'' ಎಂದು ಗುರುತಿಸಲಾಗುತ್ತದೆ.

ಕಾವ್ಯ ಮೀಮಾಂಸೆ ಮಾತ್ರವಲ್ಲದೆ ಇತರ ಶಾಸ್ತ್ರಗಳು ಸಂಸ್ಕೃತದಲ್ಲಿ ಸಮೃದ್ಧವಾಗಿ ಬೆಳೆದವು. ಆ ಶಾಸ್ತ್ರಗಳ ವಿಷಯವನ್ನು, ಪರಿಭಾಷೆಗಳನ್ನು ಮತ್ತು ಆಯಾ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರಾದೇಶಿಕ ಭಾಷೆಗಳು ಅನುವಾದ ಮಾಡಿಕೊಂಡವು. ಹೀಗೆ ಅನುವಾದ ಮಾಡಿಕೊಂಡಾಗ ಕೂಡಾ ತಮ್ಮ ತಮ್ಮ ಭಾಷೆಯ ಕಾವ್ಯಕ್ಕೆ ವಿಶಿಷ್ಟವಾಗಿರುವ ವಿಚಾರ ಹಾಗು ಸಮಸ್ಯೆಗಳನ್ನು ಕಾವ್ಯದ ಮತ್ತು ಕಾವ್ಯ ಮೀಮಾಂಸೆಯ ಭಾಗವಾಗಿ ಪರಿಗಣಿಸಿದ್ದೂ ಉಂಟು. ಮಾರ್ಗ, ದೇಸಿಯನ್ನು ಕುರಿತ ಚರ್ಚೆಯನ್ನು ಇಂಥ ಸಂಗತಿಗಳಿಗೊಂದು ಉದಾಹರಣೆ ಎನ್ನಬಹುದು. ಇಂಥ ಸಂಗತಿಗಳ ವಿವರವಾದ ಪರಿಶೀಲನೆಯನ್ನು ಮುಂದಿನ ಅಧ್ಯಾಯಗಳಲ್ಲಿ ಎತ್ತಿಕೊಳ್ಳಲಾಗಿದೆ.

ಭಾಷೆಯ ಬಳಕೆ, ಧೋರಣೆ, ಪ್ರವೃತ್ತಿ, ಪ್ರಕಾರದ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ವಚನಗಳನ್ನು ಕಾವ್ಯಮೀಮಾಂಸೆಯ ದೃಷ್ಟಿಯಿಂದ ಪರಿಶೀಲಿಸುವುದು ಉಪಯುಕ್ತವಾಗುತ್ತದೆ. ಈ ಕಾರ್ಯಕ್ಕೆ ನೇರವಾಗಿ ತೊಡಗುವ ಮೊದಲು ಕನ್ನಡದಲ್ಲಿ ಆದ ಕಾವ್ಯ ಮೀಮಾಂಸೆಯನ್ನು ಅಥವಾ ಕಾವ್ಯ ಮೀಮಾಂಸೆಗೆ ಕನ್ನಡ ಚಿಂತಕರು ನೀಡಿರುವ ಕೊಡುಗೆಗಳನ್ನು ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳ ಸ್ಥೂಲ ಸಮೀಕ್ಷೆ ನಡೆಸುವುದು ಉಚಿತವಾಗುತ್ತದೆ.

## ಉಲ್ಲೇಖಗಳು


೧. ಜಿ. ಎಸ್. ಶಿವರುದ್ರಪ್ಪ : ೧೯೮೯ : ಕನ್ನಡ ಕವಿಗಳ ಕಾವ್ಯ ಕಲ್ಪನೆ : ಮೈಸೂರು ವಿಶ್ವವಿದ್ಯಾಲಯ: ಮೈಸೂರು.

೨. ಎಂ. ವಿ. ಸೀತಾರಾಮಯ್ಯ: ೧೯೬೫: ಕವಿರಾಜಮಾರ್ಗಂ: ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್ : ಮೈಸೂರು.

೩. ಕೆ. ವಿ. ನಾರಾಯಣ:೧೯೮೪:ಬಿಂಬ್ದಿ - ಕಾವ್ಯ ದೃಷ್ಟಿ : ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು:

೪. ತೀ. ನಂ. ಶ್ರೀ.: ೧೯೯೨ : ಭಾರತೀಯ ಕಾವ್ಯ ಮೀಮಾಂಸೆ :ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು:

೫, CHOMSKY :1992 : PROBLEMS OF LANGUAGE AND KNOWLEDGE :5TH EDITION:

೬, CHOMSKY : 1972 : LANGUAGE AND MAIND:

## ಅಧ್ಯಾಯ: ೨.

## ವಚನಗಳಲ್ಲಿ ಕನ್ನಡ ಕಾವ್ಯಮೀಮಾಂಸೆಯ ಪರಿಕಲ್ಪನೆಗಳನ್ನು ಕುರಿತು

### ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ.

ವಚನಕಾರರ ಭಾಷೆ ಮತ್ತು ಅಭಿವ್ಯಕ್ತಿಸ್ವರೂಪದ ಬಗ್ಗೆ ನಡೆದಿರುವ ಚಿಂತನೆಗಳನ್ನು ಆಂಶಿಕವಾಗಿಯಾದರೂ ಗಮನಿಸಿರುವ ಹಲವು ಬರಹಗಳು ಪ್ರಕಟವಾಗಿವೆ . ಈ ಬರಹಗಳು ಇತರ ಉದ್ದೇಶಕ್ಕಾಗಿ ನಡೆಸಿದ ಅಧ್ಯಯನದ ಭಾಗವಾಗಿ ಅಥವಾ ವಚನಕಾರರನ್ನೇ ಕುರಿತ ವಿಸ್ತೃತ ಚಿಂತನೆಯ ಭಾಗವಾಗಿ ಮೂಡಿವೆ . ಹೀಗೆ ವ್ಯಕ್ತವಾಗಿರುವ ಅಭಿಪ್ರಾಯ ಮತ್ತು ಧೋರಣೆಗಳು ಒಟ್ಟಾರೆಯಾಗಿ ಕನ್ನಡ ಕಾವ್ಯ ಮೀಮಾಂಸೆಯನ್ನು ಕಟ್ಟಿಕೊಳ್ಳುವ ಪ್ರಯತ್ನ ಒಂದರ ಪೂರ್ವಸಿದ್ಧತೆ ಎಂಬಂತೆ ತೋರುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಸೂಕ್ತ ಹಿನ್ನೆಲೆಯೊಂದನ್ನು ಕಲ್ಪಿಸಿಕೊಳ್ಳುವ ಉದ್ದೇಶದಿಂದ ಈ ಬಗೆಯ ಅಂಶಗಳುಳ್ಳ ಮುಖ್ಯ ಕೃತಿಗಳನ್ನು ಲೇಖನಗಳನ್ನು ಈ ಅಧ್ಯಾಯದಲ್ಲಿ ಗಮನಿಸಲಾಗಿದೆ. ಪುಸ್ತಕ ಮತ್ತು ಲೇಖನಗಳ ಪಟ್ಟಿಯನ್ನು ಅನುಬಂಧದಲ್ಲಿ ಕೊಡಲಾಗಿದೆ.

ಎಂ. ಆರ್. ಶ್ರೀನಿವಾಸ ಮೂರ್ತಿ: ೧೯೪೪: ವಚನ ಧರ್ಮಸಾರ:

ವಚನಕಾರರಲ್ಲಿನ ಕಾವ್ಯ ಮೀಮಾಂಸೆಯ ವಿಚಾರಗಳನ್ನು ಮೊದಲು ಚರ್ಚಿಸಿದ ಕೃತಿಯಾಗಿದೆ. ಕನ್ನಡ ಭಾಷೆಯ ಜೀವಾಳವನ್ನು ಗ್ರಹಿಸಿ ಅಲಂಕಾರಗಳನ್ನು ವಚನಕಾರರು ಬಳಸಿದ್ದಾರೆ. ಕಾಯಕದ ಅನುಭವಗಳ ಹಾಗೂ ಭಕ್ತಿಯ ಅಂಶಗಳ ಅಭಿವ್ಯಕ್ತಿಗೆ ಸಹಾಯಕವಾಗಿ ರೂಪಕ- ಪ್ರತಿಮೆಗಳು ಬಳಕೆಯಾಗಿವೆ. ನುಡಿ ಅಥವಾ ಮಾತಿನಲ್ಲಿನ ಅರ್ಥದ ಬಹು ಸಾಧ್ಯತೆಗಳು ಕನ್ನಡದ ವೈಶಿಷ್ಟ್ಯವಾಗಿದೆ ಎಂದು ಗುರುತಿಸುತ್ತಾರೆ.

ಕಾಯಕದ ಅನುಭವಗಳು ಎಂದಾಗ ''ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ, ಲಂಕೆಯ ನೀಗುಚಿ ಸರಿಗೆಯ ಸಮಗೊಳಿಸಿ ' ಎಂಬ ವಚನವನ್ನು ಉದಾಹರಿಸುತ್ತಾರೆ. ಶಬ್ದಾಲಂಕಾರಗಳಬಗ್ಗೆ ಹೇಳುವಾಗ 'ಕುರುಹ ಮುಟ್ಟದೆ ಕೂದಲು ಹರಿಯದೆ ಬೋಳಾಗ ಬೇಕು' ಎಂಬ ವಚನವನ್ನು ಉದಾಹರಿಸುತ್ತಾರೆ. ಸಾಹಿತ್ಯದ ಹಾಗೂ ಕೃತಿಯ ಮೌಲಿಕತೆ ಮತ್ತು ಸಾರ್ಥಕತೆ ಕುರಿತಂತೆ ಇದ್ದರೂ ಈ ಅಂಶಗಳನ್ನೆಲ್ಲ ವಚನ ಸಾಹಿತ್ಯ ಒಳಗೊಂಡಿದೆ ಎನ್ನುತ್ತಾರೆ. ಈ ಹಿನ್ನಲೆಯಲ್ಲಿಯೇ ವಚನದ ಸ್ವರೂಪವನ್ನು ಅರ್ಥೈಸುತ್ತಾರೆ ಹಾಗೂ ವಚನಗಳನ್ನು ಅಭ್ಯಸಿಸಲು ಬಳಸುತ್ತಾರೆ.

ಡಾ: ತಿಪ್ಪೇರುದ್ರಸ್ವಾಮಿ: ೧೯೬೩: ಶರಣರ ಅನುಭಾವ ಸಾಹಿತ್ಯ:

ಸಾಹಿತ್ಯ ಮತ್ತು ಅನುಭಾವ , ವಚನಗಳ ರೂಪ ಮತ್ತು ಸ್ವರೂಪ, ಬೆಡಗಿನ ವಚನಗಳು ಎಂಬ ಪ್ರಮುಖವಾದ ಮೂರು ಲೇಖನಗಳಲ್ಲಿ ವಚನಗಳ ವಸ್ತು ,ಸ್ವರೂಪ ಕುರಿತಂತೆಯೂ ಮತ್ತು ವಚನಗಳಲ್ಲಿನ ಕಾವ್ಯ ಮೀಮಾಂಸೆಯ ಪ್ರಶ್ನೆಗಳ ಕುರಿತಂತೆ ವಿಚಾರಗಳನ್ನು ಚರ್ಚಿಸುತ್ತಾರೆ. ಕೆಲವು ಪ್ರಮುಖ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ.

ವಚನಗಳ ರೂಪ ಮತ್ತು ಸ್ವರೂಪ ಲೇಖನದಲ್ಲಿ ವಚನಗಳ ರಚನೆಯ ಬಗೆಗೆ ಚಿಂತನೆಗಳಿವೆ. ವಚನ ಗದ್ಯದ ಒಂದು ಭಾಗ ಎನ್ನುವ ಅರ್ಥ ಮೊದಲಿನಿಂದಲೂ ಬಳಕೆಯಲ್ಲಿದೆ. ಚಂಪು ಕಾವ್ಯಗಳಲ್ಲಿ

ಬರುವ ಗದ್ಯ ಭಾಗವನ್ನು ವಚನವೆಂದೇ ಕರೆಯಲಾಗುತ್ತಿತ್ತಾದರೂ ಅಲ್ಲಿನ ವಚನಗಳಿಗೂ ಇಲ್ಲಿನ ವಚನಗಳಿಗೂ ವ್ಯತ್ಯಾಸವಿದೆ. ಶರಣರ ವಚನಗಳು ಭಾವಗೀತಾತ್ಮಕ ರೀತಿಯಲ್ಲಿದ್ದು, ಪದ್ಯದಲ್ಲಿನ ಭಾವಸೌಂದರ್ಯ ಹಾಗೂ ಗದ್ಯದಲ್ಲಿನ ವಿಚಾರ ಪ್ರತಿಪಾದನೆಯ ಎರಡೂ ಗುಣಗಳನ್ನು ಹೊಂದಿದ್ದು

ಗದ್ಯಗೀತೆಗಳೆಂದು ಕರೆಯಬಹುದೆಂದು ಅಭಿಪ್ರಾಯಪಡುತ್ತಾರೆ. ಪದ್ಯಕ್ಕಿರಬೇಕಾದ ಪ್ರಾಸ, ಗಣ, ಯತಿ, ಗುರು, ಲಘುಗಳ ಕಟ್ಟುನಿಟ್ಟಿನ ಬಂಧನಗಳಿಲ್ಲದಿದ್ದರೂ ಭಾವಕ್ಕೆ ಅನುಗುಣವಾದ ವಿಶಿಷ್ಟ ಲಯವನ್ನು ವಚನಗಳಲ್ಲಿ ಕಾಣಬಹುದು ಎನ್ನುತ್ತಾರೆ.

ವಚನಗಳ ಸ್ವರೂಪವೆಂದರೆ ವಚನಕಾರರ ಮನಸಿನ ಸ್ವರೂಪ ಎಂದೆನ್ನುತ್ತಾರೆ. ದೈವೀಶಕ್ತಿಯನ್ನು ಕುರಿತ ಅವರ ಹಂಬಲ, ಪ್ರಾರ್ಥನೆ, ಭಕ್ತಿಯ ವಿವಿಧ ಭಾವಗಳು, ವಚನಗಳಾಗಿ ಮೂಡಿವೆ. ವಚನಗಳಲ್ಲಿ ಬಳಕೆಯಾಗುವ ಅಲಂಕಾರಗಳು ಅನುಭವವನ್ನು ಅಭಿವ್ಯಕ್ತಗೊಳಿಸುವ ಅನಿವಾರ್ಯ ಸಾಧನಗಳಂತಿವೆ.

ವಚನಗಳು ವಚನಕಾರರ ಮಾನಸಿಕ ಪ್ರಜ್ಞೆಯ ವಿಕಾಸದ ಹಲವು ಹಂತಗಳನ್ನು ತೀವ್ರ ಭಾವಸಂವೇದನೆಗಳನ್ನು, ಸಂಗತ್ವದಿಂದ ನಿಸ್ಸಂಗತ್ವದೆಡೆಗೆ, ನಿರ್ಲಿಪ್ತತೆಯೆಡೆಗೆ ಸಾಗುವಂಥದ್ದನ್ನು ಕಟ್ಟಿಕೊಡುತ್ತವೆ ಎನ್ನುತ್ತಾರೆ.

ವಿ. ಸೀತಾರಾಮಯ್ಯ (೧೯೭೩) ಕವಿರಾಜಮಾರ್ಗ:

ಕಾವ್ಯ ಮೀಮಾಂಸೆಗೆ ಸಂಬಂಧಿಸಿದಂತೆ ಶ್ರೀವಿಜಯನ ಚಿಂತನೆಗಳನ್ನು ಕಾಣಬಹುದು. ಕಾವ್ಯ ಎನ್ನುವುದು ಕವಿ ಭಾವ ನಿರ್ಮಿತ; ಅನೇಕ ಪ್ರಕಾರಗಳಲ್ಲಿ ಅಭಿವ್ಯಕ್ತಿ ಪಡೆಯುವ ಉಕ್ತಿ ಮಾತ್ರ, ವಿಶಿಷ್ಟವಾದ ಶಬ್ದ ರಚನೆ, ವಿವಿಧಾರ್ಥಗಳ ಅಭಿವ್ಯಕ್ತಿರೂಪದ ಅಲಂಕಾರ ಎನ್ನುತ್ತಾನೆ. ನುತ ಶಬ್ದಾಲಂಕಾರದೊಳ್ ಅತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ '' (೧-೨೨) ಎನ್ನುತ್ತ ಸಂಸ್ಕೃತದಲ್ಲಿಲ್ಲದ ಆದಿಪ್ರಾಸ ಕನ್ನಡದಲ್ಲಿ ಪ್ರಾಮುಖ್ಯ ಪಡೆದಿರುವಂಥದ್ದನ್ನು ಗುರುತಿಸಿ ಪ್ರಶಸ್ತಿ ನೀಡಿದ್ದಾನೆ.

ಸಂಸ್ಕೃತ ಲಕ್ಷಣಗಳನ್ನು ಅನುವಾದಿಸುತ್ತಲೇ, ಕನ್ನಡ ಕಾವ್ಯ ರಚನಾಪದ್ಧತಿಗೆ ಹೊಂದಿಕೊಳ್ಳುವಂಥ ಉದಾಹರಣ ಪದ್ಯಗಳನ್ನು ರಚಿಸಿರುವುದನ್ನು ಕಾಣಬಹುದು. ಹಾಗೂ ಉದಾಹರಣ ಪದ್ಯಗಳ ಹಿನ್ನೆಲೆಯಲ್ಲಿಯೇ ದೋಷ, ಅದೋಷಗಳನ್ನು ನಿರ್ಣಯಿಸಿ ಹೇಳುವುದು ಕವಿರಾಜಮಾರ್ಗದ ವೈಶಿಷ್ಟ್ಯವಾಗಿದೆ. ಛಂದೋ ವಿಚಾರ, ಪದ ಪ್ರಯೋಗ ಪದ್ಧತಿ, ವ್ಯಾಕರಣ ವಿಚಾರಗಳಲ್ಲಿನ ಕನ್ನಡಕ್ಕೆ ಸಂಬಂಧಿಸಿದ ಅಂಶಗಳನ್ನು, ಲಕ್ಷಣಗಳನ್ನು ಗುರುತಿಸಿ ತಿಳಿಸಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

ಎಂ.ವಿ. ಸೀತಾರಾಮಯ್ಯ : ೧೯೭೪ : ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ :

ಈ ಕೃತಿಯಲ್ಲಿ ಕಾವ್ಯ ಸ್ವರೂಪ, ಕಾವ್ಯ ಪ್ರಭೇದಗಳು ಎಂಬ ಲೇಖನಗಳಿದ್ದು, ಕಾವ್ಯ ಸ್ವರೂಪವೆಂಬ ಲೇಖನದಲ್ಲಿ ಶ್ರೀವಿಜಯ, ಪಂಪನ ಕೃತಿಯಲ್ಲಿನ ಉಕ್ತಿಗಳ ಹಿನ್ನೆಲೆಯಲ್ಲಿ ಕಾವ್ಯ ಎಂದರೇನು? ಕಾವ್ಯ ಧರ್ಮ ಎಂದರೇನು ? ಎಂಬುದರ ಬಗ್ಗೆ ವಿಶ್ಲೇಷಿಸುತ್ತದೆ. ಕಾವ್ಯ ಪ್ರಭೇದ ಎಂಬ ಲೇಖನದಲ್ಲಿ ಮಾರ್ಗ, ದೇಸಿ, ವಸ್ತುಕ, ವರ್ಣಕ ಕುರಿತಂತೆ ವಿಶ್ಲೇಷಿಸುತ್ತಾರೆ.

ಶ್ರೀವಿಶದ - ವರ್ಣ ಮಧುರಾ
ರಾವ್ಯೌಚಿತ ಚತುರ ರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

ಎಂಬ ಕವಿರಾಜಮಾರ್ಗದ ಸಾಲುಗಳು ಸರಸ್ವತಿ ವರ್ಣನೆಯನ್ನು ತಿಳಿಸುತ್ತಿದ್ದರೂ ಕನ್ನಡ ಕಾವ್ಯ ಸ್ವರೂಪವನ್ನು ಕುರಿತಂತೆ ಅಭಿಪ್ರಾಯ ವ್ಯಕ್ತಪಡಿಸುತ್ತದೆ. 'ಮಧುರ, ಔಚಿತ್ಯ, ಚತುರ, ಸುಂದರ ಪದರಚನೆ ಹೊಂದಿರುವಂಥದ್ದು ಕಾವ್ಯ ' ಎಂದು ಅಭಿಪ್ರಾಯಪಡುತ್ತದೆ.

ಕಾವ್ಯ ಪ್ರಭೇದ ಎಂಬ ಲೇಖನದಲ್ಲಿ ವಸ್ತುಕ - ವರ್ಣಕ ,ಮಾರ್ಗ- ದೇಸಿ ಲಕ್ಷಣಗಳು ತಿಳಿಸುತ್ತಲೇ ಕಾವ್ಯ ಮೀಮಾಂಸಾ ಪ್ರಶ್ನೆಗಳಿಗೆ ಉತ್ತರಿಸುವುದನ್ನು ಕಾಣಬಹುದು. ಗದ್ಯ ಪದ್ಯ ಮಿಶ್ರಿತವಾದ ಚಂಪೂವನ್ನು ವಸ್ತುಕವೆಂದು ,ರಗಳೆ -ಷಟ್ಪದಿ - ಸಾಂಗತ್ಯ ಎಂಬ ದೇಸಿ - ಛಂದಸ್ಸುಗಳುಳ್ಳ

ಕಾವ್ಯವನ್ನು ವರ್ಣಕಗಳೆಂದು ಗುರುತಿಸಲಾಗಿದೆ. ವಸ್ತುಕ - ವರ್ಣಕಗಳೆಂಬ ಕಲ್ಪನೆಗಳು ಕಾವ್ಯ ವಿಭಾಗಣೆಗೆ ಕನ್ನಡದ ಕೊಡುಗೆ ಎನ್ನಬಹುದು. ಶಬ್ದ ಸ್ವರೂಪದ ಹಿನ್ನೆಲೆಯಲ್ಲಿ ವಸ್ತುಪ್ರಧಾನವಾದದ್ದು ವಸ್ತುಕ ಎಂದು ,ವರ್ಣನಾ ಪ್ರಧಾನವಾದದ್ದು ವರ್ಣಕವೆಂದು ಎ.ಆರ್.ಕೃಷ್ಣಶಾಸ್ತ್ರಿಗಳ ಅಭಿಪ್ರಾಯವನ್ನು ಒಪ್ಪುತ್ತಾರೆ.

ಎಂ.ಚಿದಾನಂದ ಮೂರ್ತಿ:೧೯೭೫: [illegible] ಸಾಹಿತ್ಯ ಚರಿತ್ರೆ ಸಂ.೧ :

ಪ್ರಸ್ತುತ ಲೇಖನದಲ್ಲಿ 'ವಚನಗಳನ್ನು ಭಾಷಿಕ ಸಾಧ್ಯತೆಗಳ ' ಹಿನ್ನೆಲೆಯಲ್ಲಿ ವಿವೇಚಿಸುತ್ತಾರೆ. ವಚನ ಒಂದು ಬಗೆಯ ರಚನೆಯೆಂದು ಗುರುತಿಸುತ್ತಾರೆ. ವಚನವನ್ನು ಮಾತು, ಆಡಿದ್ದು, ಸಂಭಾಷಣೆ, ಪ್ರತ್ಯುತ್ತರ ಎಂಬರ್ಥಗಳಲ್ಲಿ ಗುರುತಿಸುತ್ತಾರೆ. ತೀವ್ರವಾದ ಅನುಭವ ಹಾಗೂ ಮೊನಚಾದ ಆಲೋಚನೆಗಳಿಂದಾಗಿಯೂ ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಸ್ವರೂಪವನ್ನು ವಚನಗಳು ಹೊಂದಿವೆ ಎನ್ನುತ್ತಾರೆ. ಹಾಗೂ ಈ ಅಂಶಗಳೇ ವಚನಗಳಿಗೆ ಭಾವಗೀತೆಯ ಹಾಗೂ ಪದ್ಯದ ಲಯಗಾರಿಕೆಯನ್ನು ತಂದು ಕೊಟ್ಟಿವೆ. ಹಾಗಾಗಿಯೇ ವಚನಗಳಲ್ಲಿ ತ್ರಿಪದಿಯ ಲಯ ಹಾಗೂ ಪ್ರಾಸ ವಿನ್ಯಾಸಗಳನ್ನು ಕಾಣಬಹುದಾಗಿದೆ. ಈ ಅಂಶಗಳೇ ಒಳಗೊಳ್ಳಲು ಕಾರಣವೇನೆಂದರೆ ಇವರು ಕವಿಗಳಲ್ಲ ಹಾಗೂ ಬರೆದದ್ದು ಕಾವ್ಯವೂ ಅಲ್ಲ. ಇವರಿಗಿದ್ದಂತ ಶ್ರೋತೃ ವರ್ಗವು ಪಂಡಿತರದೂ ಅಲ್ಲ, ಹಾಗಾಗಿ ತಮ್ಮ ವಿಚಾರ, ಅನುಭವಗಳು ಜನಸಾಮಾನ್ಯರಿಗೆ ತಿಳಿದು ಉಳಿಯಬೇಕಾಗಿದ್ದರಿಂದ ತ್ರಿಪದಿ-ಚೌಪದಿಗಳ ಲಯಗಳೊಂದಿಗೆ, ಒಗಟು, ಗಾದೆಗಳೂ ಒಳಪಟ್ಟವು ಹಾಗೂ ಶರಣರ ಸೂಳ್ನುಡಿಗಳೆ ವಚನಗಳ ಪ್ರಧಾನವಸ್ತುಗಳಾದವು ಎನ್ನುತ್ತಾರೆ.

ಪ್ರಮುಖ ವಚನಕಾರರು ಎಂಬ ಮತ್ತೊಂದು ಲೇಖನದಲ್ಲಿ ಭಾಷೆಯೆಂಬುದು ವಚನಕಾರರಿಗೆ ಎಂದೂ ತೊಡಕಾಗಿರಲಿಲ್ಲ ಎನ್ನುತ್ತಾರೆ. 'ನುಡಿದರೆ ಮುತ್ತಿನ ಹಾರದಂತಿರಬೇಕು', 'ಆನು ಒಲಿದಂತೆ ಹಾಡುವೆ' ಎಂಬ ಬಸವಣ್ಣನವರ ವಚನಗಳು ವಚನಕಾರರ ಭಾಷಾ ಶಕ್ತಿಯ ಪ್ರತೀಕಗಳಾಗಿವೆ. ಹಾಗೂ ಕಾವ್ಯದ ರಚನೆ ಮತ್ತು ಕವಿಯ ಸ್ವಾತಂತ್ರ್ಯ ಕುರಿತು ಹೇಳಿದ ವ್ಯಾಖ್ಯಾನಗಳಂತಿವೆ ಎನ್ನುತ್ತಾರೆ. ವಚನಕಾರರಿಗೆ

ವಚನ 'ಕಲೆಯಾಗಿರಲಿಲ್ಲ ಕ್ರಿಯೆ ಹಾಗೂ ಕಾಯಕವಾಗಿತ್ತು' ಆದ್ದರಿಂದಲೇ ವಚನಗಳಲ್ಲಿ 'ಪ್ರಜ್ಞಾ ಪೂರ್ವಕ ಶಿಲ್ಪಗಳಿಗಿಂತ ಆಡುಮಾತಿನ ಧಾಟಿಗಳು' ಕಂಡು ಬರುತ್ತವೆ ಎನ್ನುತ್ತಾರೆ.

ಜಿ.ಎಸ್.ಶಿವರುದ್ರಪ್ಪ :೧೯೭೭: ವಚನಗಳಲ್ಲಿ ಕಾವ್ಯತತ್ವ:

ವಚನಕಾರರು ಕಾವ್ಯ ಪ್ರಪಂಚದ ಪ್ರಶ್ನೆಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ. ವಚನಕಾರರು ಲಿಟರೇಚರ್ ಎಂಬರ್ಥದಲ್ಲಿ ಸಾಹಿತ್ಯವನ್ನು ಗುರುತಿಸಲಿಲ್ಲ. ಅವರಿಗೆ ಸಾಹಿತ್ಯದ ಆಕರ್ಷಣೆಯಿಂದ, ಸಾಹಿತ್ಯವಾಗುವ ಅಪಾಯದಿಂದ ಪಾರಾಗಬೇಕು ಎಂಬ ನಿಲುವಿತ್ತು.

ವಚನಗಳು ಸಿದ್ಧ ಪಡಿಸಿದ ಮಾರ್ಗ ರಚನೆಗಳ ಸಂಪ್ರದಾಯವನ್ನು ಮುರಿದು, ಅವುಗಳ ನಿರಾಕರಣೆಯಲ್ಲಿಯೇ ವಚನಗಳು ರೂಪಿತವಾಗಿವೆ, ಪರಂಪರೆ ಕುರಿತ ಅರಿವು, ಅದರ ಹಿಡಿತದಿಂದ ಪಾರಾಗುವ ಹಾಗು ವರ್ತಮಾನದ ಬಗೆಗೆ ಎಚ್ಚರವಿದ್ದು ಪ್ರಭಾವಗಳಿಂದ ದೂರವಿರುವ ಸಾಮರ್ಥ್ಯವಿರಬೇಕು ಎಂಬ ಅಂಶ ಅವರಿಗೆ ತಿಳಿದಿತ್ತು ಎನ್ನುತ್ತಾರೆ.

ಕೆ. ಜಿ. ನಾಗರಾಜಪ್ಪ :೧೯೮೫: ಮರುಚಿಂತನೆ :

ಈ ಕೃತಿಯ ಲೇಖನಗಳಲ್ಲಿ ವಚನಕಾರರಲ್ಲಿನ ಬಗೆಗಳನ್ನು, ವಚನಕಾರರ ಮೇಲೆ ಹಿಂದಿನ ಕಾವ್ಯ ಪರಂಪರೆ ಬೀರಿದ ಪ್ರಭಾವಗಳನ್ನು, ಕನ್ನಡದಲ್ಲಿ ಕಾವ್ಯಮೀಮಾಂಸೆ ಶಾಸ್ತ್ರರೂಪದಲ್ಲಿ ಮೂಡದಿದ್ದಕ್ಕೆ ಕಾರಣಗಳನ್ನು ಕುರಿತು ಚರ್ಚಿಸುತ್ತಾರೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಅನ್ಯಮತ ಖಂಡನೆ, ಸ್ವಮತ ಸಮರ್ಥನೆ, ಧಾರ್ಮಿಕ ತತ್ವಗಳಿಗೆ ಆದ್ಯತೆ ನೀಡುತ್ತ ಹೋಗಿದ್ದನ್ನು ಕಾಣಬಹುದು. ವೀರಶೈವ ಕವಿಗಳೂ ಸಹ ವಿವಿಧ ವರ್ಗಗಳ, ಸಾಮಾನ್ಯ ಜನತೆಯ ಆಚಾರ, ವಿಚಾರ ಬಿಂಬಿಸುವುದಕ್ಕೆ ಮಾತ್ರ ಸೀಮಿತರಾದರು. ಪ್ರತಿಭೆಗಿಂತ ವ್ಯುತ್ಪತ್ತಿಗೆ ಆದ್ಯತೆ ನೀಡಿದ್ದರಿಂದ ಅನುಕರಣ ಗ್ರಂಥಗಳು ಅಧಿಕವಾದವು. ಕಾವ್ಯದಲ್ಲಿ ಧರ್ಮ, ಧರ್ಮದಲ್ಲಿ ಕಾವ್ಯ ಎಂಬಂಥ ಅಂಶಗಳು ಬುದ್ಧಿ ಜೀವಿಗಳ ಪಾಲಿಗೆಯ ಕಸರತ್ತಿನಲ್ಲಿ, ರಕ್ಷಣೆಯಲ್ಲಿ ಮಾತ್ರ

ಬೆಳೆಯಿತು. ಎಲ್ಲಿಯೂ ಹೆಚ್ಚಾಗಿ ಕಾವ್ಯ ವಿಮರ್ಶೆಯ ವಿಚಾರಗಳು ಚಿಂತನೆಗೆ ಒಳಗಾಗಲಿಲ್ಲ ಎನ್ನುತ್ತಾರೆ. ವಚನ ರಚನೆ (ಪ್ರಕಾರ) ಇದ್ದಕ್ಕಿದ್ದ ಹಾಗೆ ಮೂಡಿದ್ದಲ್ಲ, ಅದರ ಒಳ, ಹೊರ ಸ್ವರೂಪದ ಮೇಲೆ ಬೌದ್ಧ, ಜೈನ, ವೈದಿಕ, ತಾಂತ್ರಿಕ, ಗುಪ್ತ ಸಮಾಜದ ಪ್ರಭಾವವಿದೆ. 'ವಚನವೇ ಬೇರೆ, ವಚನ ರಚನೆಯೇ ಬೇರೆ', 'ವಚನಕಾರರು ಹಾಗು ವಚನ ರಚನಾಕಾರರು ಬೇರೆ ಬೇರೆ', ' ಎನ್ನುತ್ತಾರೆ.

ಡಾ. ವಿ. ಸೀತಾರಾಮಯ್ಯ (ಸಂ) ೧೯೮೮ : ಕವಿಕಾವ್ಯ ಪರಂಪರೆ ಬಸವೇಶ್ವರ :

'ವಚನಗಳ ಸ್ವರೂಪ, ಮೌಲ್ಯ, ವಚನ ಸಾಹಿತ್ಯಕ್ಕೆ ಬಸವಣ್ಣನವರ ಕಾಣಿಕೆ' ಹಾಗು 'ಬಸವಣ್ಣನವರ ವಚನಗಳ ಶಿಲ್ಪ ವಿಧಾನ' ಎಂಬ ಲೇಖನಗಳಲ್ಲಿ ವಚನಗಳ ವಸ್ತು ಹಾಗು ಸ್ವರೂಪ ಕುರಿತ ಚರ್ಚೆಗಳಿವೆ. ಸತ್ಯಾನ್ವೇಷಣೆ ವಚನಗಳ ಪ್ರಮುಖ ಹಾಗು ಸಹಜ ಗುರಿಯಾಗಿತ್ತು. ಸತ್ಯದ ಹಂಬಲು ಸಾಹಿತ್ಯವಾಗಿ, ಸತ್ಯಾನ್ವೇಷಣೆಯು ಸಿದ್ಧಾಂತವಾಗಿ, ಸತ್ಯ ಸಾಕ್ಷಾತ್ಕಾರವೇ ದರ್ಶನವಾಗಿ ವಚನಗಳಲ್ಲಿ ಮೂಡಿದೆ.

ವಚನಗಳ ಮಾದರಿಯು ಮನುಷ್ಯನ ಮನಸ್ಸಿನ ಚಂಚಲತೆ ತಿಳಿಸಲು ಮತ್ತು ಸಂಬಂಧಗಳ ವೈವಿಧ್ಯತೆ ತಿಳಿಸಲು ಹಾಗು ಪರಂಪರೆಯ ಪ್ರಭಾವವನ್ನು ಸಾರಲು ಸಹಾಯಕವಾಯಿತು, ಶಬ್ದ ಮುಗ್ಧಸ್ಥಿತಿಯನ್ನು ಹೊಂದುವುದು ವಚನಗಳ ಮುಖ್ಯ ಗುರಿಯೆನಿಸಿತ್ತು. ವಚನಗಳಲ್ಲಿ ಬಳಕೆಯಾಗುವ ಉಪಮೆ, ರೂಪಕ, ದೃಷ್ಟಾಂತಗಳು ಅರ್ಥವಿಶದ ಪಡಿಸುವ ಉಪಾಯಗಳಾಗಿ ಬಂದಿವೆ ಎಂದು .... ಹೇಳುತ್ತಾರೆ.

ಎರಡನೆಯ ಲೇಖನದಲ್ಲಿ ದೇಸಿಯಂತೆ, ದ್ರಾವಿಡ ಆರ್ಯ ಭಾಷೆಗಳ ಸಂಬಂಧಗಳ ಹಿನ್ನಲೆಯಲ್ಲಿ ವಚನಗಳನ್ನು ಅವಲೋಕಿಸಿದ್ದಾರೆ. ಭಗವಂತನನ್ನು ಒಲೈಸಿಕೊಳ್ಳಲು ಭಕ್ತಿಮಾರ್ಗದಲ್ಲಿ ಹೋಗುವುದರಿಂದ ದೈನ್ಯ, ದಾಸ್ಯ, ಅವಲಂಬನೆಯ ಭಾವಗಳು, ಶಬ್ದಗಳು ಬಳಕೆಯಾಗಿದ್ದು, ಇವು

ದೇಸಿ ಭಾಷಾ ಬಳಕೆ ಹಾಗು, ಚಿಂತನೆಗಳನ್ನು ಒಳಗೊಂಡಿರುವಂಥದ್ದನ್ನು ಸೂಚಿಸುತ್ತದೆ.
ಪುನರಾವರ್ತನೆಯು ತಂತ್ರ ಜನಪದರದ್ದು, ವಚನಗಳಲ್ಲಿ ಈ ಮಾದರಿಯು ಬಳಕೆಯಾಗಿರುವುದನ್ನು
ಕಾಣಬಹುದು. ಭಾಷೆಯ ಈ ತಂತ್ರ ಜನರನ್ನು ಆಕರ್ಷಿಸಲು ಹಾಗು ಚಿದಿತಹಾಧಿಸಲು
ಅನುಕೂಲಕರವಾಗಿದ್ದು ಇದನ್ನು ವಚನಕಾರರು ಅರಿತಿದ್ದರೆಂಬುದು ತಿಳಿದು ಬರುತ್ತದೆ.

ಆರ್ಯರ ಭಾಷೆಯಲ್ಲಿ ಸ್ವರಗಳಿಗೆ ಪ್ರಾಧಾನ್ಯ ಕಂಡು ಬಂದರೆ ದ್ರಾವಿಡ ಭಾಷೆಗಳಲ್ಲಿ ಹ್ರಸ್ವ,
ವ್ಯಂಜನಗಳಿಗೆ ಪ್ರಾಧಾನ್ಯ ಕಾಣಬಹುದು. ದ್ರಾವಿಡ ಭಾಷೆಗಳ ಪ್ರಭಾವದಿಂದಲೇ ಆರ್ಯ ಭಾಷೆಗಳ
ಛಂದಸ್ಸುಬಂಧಗಳಾದ ಶ್ಲೋಕ, ವೃತ್ತಗಳು ರೂಪಿತಗೊಂಡವು. ಈ ಬಗೆಗಳನ್ನು ಕನ್ನಡ ಕವಿಗಳು
ಬಳಸಿದ್ದರಿಂದ 'ಮಾರ್ಗ' ವೆಂಬ ಪದ್ಧತಿ ಮೂಡಿತು.

ಕನ್ನಡದಲ್ಲಿ ದೀರ್ಘಸ್ವರಗಳ ಕೊರತೆ ಇದ್ದುದರಿಂದ ದಾಸರು ಸಂಬೋಧನಾತ್ಮಕ ಶಬ್ದಗಳ
ಮೂಲಕ, ಶಿವಶರಣರು ಅನುನಾಸಿಕಗಳ ಮೂಲಕ ಹಾಗು ಅನುಸ್ವರಗಳ ಬಳಕೆಯ ಮೂಲಕ
ನೀಗಿಸಿಕೊಂಡರು. ವಚನಗಳೆಂಬ ಹೊಸ ಪ್ರಕಾರವನ್ನು ಹುಟ್ಟು ಹಾಕುವುದರ ಮೂಲಕ ದೇಸಿಯತನಕ್ಕೆ
ರೂಪನೀಡಿದರು ಎನ್ನುತ್ತಾರೆ.

ಜಿ.ಎಸ್. ಶಿವರುದ್ರಪ್ಪ :೧೯೮೯: ಬೆಡಗು :

ಭಾಷೆಯೊಂದರ ಅರ್ಥದ ಚಾಕಚಕ್ಯತೆ ಕುರಿತಂತೆ ವಿಚಾರಗಳಿವೆ. ಬೆಡಗು ಎಂದರೆ
ಸೌಂದರ್ಯ, ಆಶ್ಚರ್ಯ, ಚಕಿತ, ಬೆರಗು, ವಿಶೇಷವಾದದ್ದು, ವೈಖರಿಯುಳ್ಳದ್ದು ಎಂಬರ್ಥಗಳಿವೆ.
ಬೆಡಗಿನ ಭಾಷೆಯನ್ನು ಸಂಧ್ಯಾಭಾಷೆ, ಸಂಧಾಭಾಷೆ ಎಂದು ಕರೆಯುತ್ತಾರೆ. ಇದು ಉದ್ದೇಶಿತ
ಭಾಷೆಯಾಗಿದ್ದು, ಪ್ರತೀಕಾತ್ಮವಾಗಿ, ವರ್ಣನಾತ್ಮಕವಾಗಿ, ಧ್ವನ್ಯಾರ್ಥಗಳನ್ನು ಒಳಗೊಂಡಿದ್ದಾಗಿರುತ್ತದೆ.
ಸಂಸ್ಕೃತಿಯೊಂದರಲ್ಲಿ ಮೂಡುವ ಪ್ರತೀಕಗಳು ಕಾವ್ಯದಲ್ಲಿ, ಅನುಭಾವಿಕ ವಲಯಗಳಲ್ಲಿ ಒಗಟುಗಳಲ್ಲಿ,
ಬಳಕೆಯಾಗುತ್ತ ಬೆಡಗಿನ ವಿಶಿಷ್ಟ ಛಾಪನ್ನು ಒತ್ತುತ್ತದೆ.

ಸಂಸ್ಕೃತ ಚಿಂತನೆಗಳಾದ ವ್ಯಂಗ್ಯೋಕ್ತಿ, ಸ್ವಭಾವೋಕ್ತಿಗಳೇ ಕಾವ್ಯದ, ಜೀವಾಳ, ಕಾವ್ಯಾತ್ಮ ಧ್ವನಿ: ಎಂಬಂಥವುಗಳಿಗೆ ಸಮಾನಾಂತರವಾಗಿ ವಚನಗಳಲ್ಲಿ ಬೆಡಗಿನ ಅಂಶಗಳು ಬಂದಿವೆ ಹಾಗು ಕನ್ನಡ ಪರಂಪರೆಯಲ್ಲಿ ಬೆಳೆದು ಬಂದಿದೆ ಎನ್ನುತ್ತಾರೆ.

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ (ಸಂ.): ೧೯೮೯: ಕನ್ನಡ ಸಾಹಿತ್ಯ ಪ್ರತಿಭೆಯ :

ಸ್ವರೂಪ ಒಂದು ತೌಲನಿಕ ಚಿಂತನೆ :

ಈ ಕೃತಿಯಲ್ಲಿ ಕಿ.ರಂ. ನಾಗರಾಜರ ಕನ್ನಡ ಕಾವ್ಯ ಪರಂಪರೆ, ಸಂಸ್ಕೃತ ಕಾವ್ಯ ಮೀಮಾಂಸೆ ಸಂಬಂಧ-ಸಂಘರ್ಷದ ನೆಲೆಗಳು ಎಂಬ ಲೇಖನದಲ್ಲಿ ಸಾಹಿತ್ಯ ಮೀಮಾಂಸೆ ಎಂದರೇನು ? ಅದರ ಗುರಿ ಯಾವುದು? ಕೃತಿಯೊಂದಿಗೆ ಓದುಗನ ಸಂಬಂಧಗಳು ಹೇಗಿರುತ್ತವೆ ? ಅನುಭವವನ್ನು ಮೀಮಾಂಸೆಯ ಚೌಕಟ್ಟಿಗೆ ಒಳಪಡಿಸಲು ಸಾಧ್ಯವಿದೆಯೇ?

ಕಾವ್ಯ ತತ್ತ್ವ ಬೆಳವಣಿಗೆಯಾಗುವುದರ ಮೂಲಕ ಬದಲಾಗಲು ಕಾರಣಗಳೇನು ? ಎಂಬುದರ ಬಗ್ಗೆ ಚರ್ಚಿಸುತ್ತಾರೆ. ಕನ್ನಡ ಸಂದರ್ಭದಲ್ಲಿ ಪ್ರಕಟಗೊಂಡಿರುವ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳಾದ ಮಾರ್ಗ - ದೇಸಿಯ ಬಗೆಗೂ ಚರ್ಚಿಸುತ್ತಾರೆ.

ದೇಸಿಗೆ ಹೆಚ್ಚು ಆದ್ಯತೆ ನೀಡುತ್ತ , ದೇಸಿ ಎಂಬುದು ಜೀವಂತ ಸ್ವರೂಪದ್ದು, ವೈವಿಧ್ಯವುಳ್ಳದ್ದು, ಸಂಸ್ಕೃತಿಯ ವಿಶಿಷ್ಟತೆ ಹಾಗು ಭಾಷಾ ವೈಶಿಷ್ಟ್ಯ ಒಳಗೊಂಡಿದ್ದೆಂದು ಗುರುತಿಸುತ್ತಾರೆ.

ಕಾವ್ಯ ಸಂಬಂಧಿಯಾದ ತತ್ತ್ವಗಳ ಚರ್ಚೆಯೇ ಸಾಹಿತ್ಯ ಮೀಮಾಂಸೆ. ಕೃತಿಯೊಂದರ ಅಥವಾ ಅನೇಕ ಕೃತಿಗಳ ಓದಿನಿಂದ ಪಡೆದ ಗ್ರಹಿಕೆ. ಆ ಗ್ರಹಿಕೆಯ ಕ್ರಮಾಗತವಾಗಿ ಸಂಯೋಜಿಸುವುದು ಸಾಹಿತ್ಯ. ಮೀಮಾಂಸೆಯ ಗುರಿ. ಪ್ರತಿಯೊಬ್ಬ ಓದುಗನು ಕೃತಿಯೊಂದಿಗೆ ಅನೇಕ ಮಟ್ಟದ ಸಂಬಂಧವನ್ನು ಸ್ಥಾಪಿಸಿರುತ್ತಾನೆ. ಅದರ ಮೂಲಕ ಕೃತಿಯಲ್ಲಿ ಗ್ರಹಿಸಿದ ನೆಲೆಗಳನ್ನು ವಿವರಿಸುತ್ತಾನೆ. ಒಬ್ಬ ಓದುಗನಿಗೆ ಅನೇಕ ಓದುಗಳು ಸಾಧ್ಯವಿರುವಂತೆ, ಕಾಲದಿಂದ ಕಾಲಕ್ಕೆ ಕೃತಿಯೊಂದರ ಓದುವಿಕೆಯ ಸ್ವರೂಪವೂ ಬದಲಾಗುತ್ತಿರುತ್ತದೆ. ಕೃತಿಯೊಂದರಿಂದ ಓದುಗ ಪಡೆಯುವ ಸಮಸ್ತ ಅನುಭವವನ್ನು ಮೀಮಾಂಸೆಯ ಪರಿಕಲ್ಪನೆಗಳ ಚೌಕಟ್ಟಿಗೆ ಒಳಪಡಿಸುವುದು ಸಾಧ್ಯವಿದೆ ಎನ್ನುತ್ತಾರೆ.

ಶಿವರುದ್ರಪ್ಪ, ಜಿ. ಎಸ್.:೧೯೮೯:ಕನ್ನಡ ಕವಿಗಳ ಕಾವ್ಯ ಕಲ್ಪನೆ:

ವಚನಕಾರರ ಕವಿ ಕುರಿತ ಧೋರಣೆ ಹಾಗು ವಸ್ತುವಿನ ಬಗ್ಗೆ ಅವರ ನಿಲುವುಗಳನ್ನು ಈ ಕೃತಿಯಲ್ಲಿ ಗಮನಿಸಬಹುದು.

ವಚನಗಳು ಕನ್ನಡ ಸಾಹಿತ್ಯದ ವಸ್ತು, ಭಾಷೆ, ಧೋರಣೆಗಳಲ್ಲಿ ಬದಲಾವಣೆಯನ್ನುಂಟು ಮಾಡಿ ದೇಸಿ ಸಂಪ್ರದಾಯಕ್ಕೆ ದಾರಿ ಮಾಡಿ ಕೊಟ್ಟವು. ವಚನಗಳು ಸಾಹಿತ್ಯದ ತುಹಿನಿಂದ ಮೂಡಿದ್ದಲ್ಲ, ಸಾಹಿತ್ಯ ಅಥವಾ ಕಾವ್ಯದ ಬಗ್ಗೆ ಹೆಚ್ಚಿನ ಒಲವು ಇರಲಿಲ್ಲ. ನಿಜವಾದ ಅನುಭವ ಸಾಧನೆಗೆ ವಿದ್ಯೆಯು ಅವಶ್ಯಕತೆಯಿಲ್ಲ ಎಂಬುದೇ ಅವರ ನಿಲುವಾಗಿತ್ತು. ವಚನಕಾರರಿಗೆ ಅನುಭಾವ ಮತ್ತು ಅದನ್ನು ಹಿಡಿದಿಡಬಲ್ಲ ಪ್ರಕಾರದ ಅವಶ್ಯವಿತ್ತು. ಹಾಗು ಅವರಿಗೆ ಸಾಹಿತ್ಯವಾಗುವ, ಕಾವ್ಯವಾಗುವ ಅಪಾಯದಿಂದ ಪಾರಾಗುವುದೇ ಅವರ ನಿಲುವಾಗಿತ್ತು. 'ಆನು ಒಲಿದಂತೆ ಹಾಡುವೆ' 'ಎನ್ನ ಕಾಯುವ ದಂಡಿಗೆಯ ಮಾಡಯ್ಯ' ಎಂಬ ವಚನಗಳು ವಸ್ತು ನಿಷ್ಠ ಕಾವ್ಯ ಪರಂಪರೆಗೆ ತೋರಿದ ಪ್ರತಿಕ್ರಿಯೆ ಹಾಗು ಮುಂದಿನ ಕಾವ್ಯ ಪರಂಪರೆಗೆ ಕಾವ್ಯ ತತ್ತ್ವದ ಸೂಚನೆಯನ್ನು ನೀಡುತ್ತದೆ. ಬರಹಗಾರನ ಸ್ವಾತಂತ್ರ್ಯದ ಬಗ್ಗೆ ತಿಳಿಸುತ್ತದೆ. ಪ್ರಾದೇಶಿಕ ವಸ್ತು ಪರಂಪರೆ ಆರಂಭವಾದದ್ದೇ ವಚನಕಾರರಿಂದ. ವಚನಗಳು ಪ್ರಾದೇಶಿಕತೆಯಲ್ಲಿ ಸಂಭವಿಸಿದ ಅಪೂರ್ವ ವ್ಯಕ್ತಿನಿಷ್ಠ ಅಭಿವ್ಯಕ್ತಿಗಳು. ಇವರು ಹಿಂದಿನ ವೇದ, ಪುರಾಣ, ಶಾಸ್ತ್ರ, ಆಗಮಗಳನ್ನು, ಮಹಾಕಾವ್ಯಗಳ ಓದುವುದೇ ವಿದ್ಯೆ ಎಂಬ ವಿಚಾರಗಳನ್ನು ವಿರೋಧಿಸುವುದ ಇವರಲ್ಲಿ ಕಾಣಬಹುದು. ವೈದಿಕರ ಕಾವ್ಯ ನಾಯಕ ಕಲ್ಪನೆಯು ಇವರಲ್ಲಿ ತಲೆಕೆಳಗಾಯಿತು. ಸಮಾಜದ ಯಾವುದೇ ಸ್ತರದ ಸಾಮಾನ್ಯ ವ್ಯಕ್ತಿ ಅಥವಾ (ಸಾಮಾನ್ಯ) ಭಕ್ತ ನಾಯಕನಾಗತೊಡಗಿದ.

ಕವಿಯ ವ್ಯಕ್ತಿತ್ವಕ್ಕೆ ಅಗತ್ಯವಾದ ಸ್ವಾತಂತ್ರ್ಯವನ್ನು ತಂದು ಕೊಡುವ ನಿಲುವನ್ನು ಪರಿಣಾಮಕಾರಿಯಾಗಿ ರೂಪಿಸಿದ್ದು ವಚನ ಚಳುವಳಿ. ಮೊದಲ ಬಾರಿಗೆ ನೇರವಾಗಿ ರಾಜತ್ವ, ಅಧಿಕಾರ, ಆಶ್ರಯಗಳನ್ನು ವಿರೋಧಿಸುತ್ತಾರೆ ಎಂದು ಜಿ.ಎಸ್. ಶಿವರುದ್ರಪ್ಪ ಗುರುತಿಸುತ್ತಾರೆ.

‘ವಚನಕಾರರ ವಿಚಾರ ಕ್ರಾಂತಿ’, ‘ಬಸವಣ್ಣನವರ ವಚನಗಳಲ್ಲಿ ಕಾವ್ಯ ಸೌಂದರ್ಯ’, ಕಾಯಕವನ್ನು ಕುರಿತ ವಚನಗಳು ’ ಎಂಬ ಮೂರು ಲೇಖನಗಳಲ್ಲಿ ವಚನದ ಸ್ವರೂಪ, ವಸ್ತು ಕುರಿತ ಚಿಂತನಗಳಿವೆ.

ಮೊದಲ ಲೇಖನದಲ್ಲಿ ಕಾಯಕವೆಂಬ ಸಾಮಾಜಿಕ ತತ್ತ್ವದ ಫಲವಾಗಿ ವಚನ ಮೂಡಿದ್ದು ಎಂದು ಗುರುತಿಸುತ್ತಾರೆ. ಹಾಗು ಮೀಮಾಂಸೆಯ ಚೌಕಟ್ಟಿನಲ್ಲಿ ಕಾಯಕವನ್ನು ಗುರುತಿಸುತ್ತಾರೆ. ಕಾಯಕದ ಲಯ, ವಚನಗಳ ಅಂತರ್ಯದಲ್ಲಿ ಗಮನಿಸುವುದು ಸಾಧ್ಯವಿದೆ. ಎನ್ನುತ್ತಾರೆ. '' ಮೃದು ವಚನವೇ ಸಕಲ ಜಪಂಗಳಯ್ಯ'' (-ಬಸವಣ್ಣ). ಎಂಬ ವಚನವನ್ನು ಉದಾಹರಿಸುತ್ತ ಅಂತರಂಗ - ಬಹಿರಂಗ ಸಮನ್ವಯ ದೃಷ್ಟಿಯೇ ಇವರ ವೈಚಾರಿಕತೆಯ ಕೊಡುಗೆ ಎನ್ನುತ್ತಾರೆ.

ಬಸವಣ್ಣನವರ ವಚನಗಳಲ್ಲಿ ಕಾವ್ಯ ಸೌಂದರ್ಯವೆಂಬ ಲೇಖನದಲ್ಲಿ ವಚನಗಳು ಶಾಸ್ತ್ರವೇ ಕಾವ್ಯವೇ ಎಂಬುದರ ಬಗ್ಗೆ ಚರ್ಚೆಯಿದೆ. ವಚನ ಸಾಹಿತ್ಯ ಮೀಮಾಂಸೆ ದೃಷ್ಟಿಯಿಂದ ಕಾವ್ಯದ ಹಾಗೆಯೂ, ಮತದ ದೃಷ್ಟಿಯಿಂದ ಶಾಸ್ತ್ರದ ಹಾಗೆಯೂ ಕಂಡು ಬರುತ್ತದೆ. ವಚನ ಪ್ರಕಾರವು ಮಾರ್ಗ, ದೇಸಿ ನಡುವೆ ಇದ್ದು, ವಸ್ತು, ರೀತಿ, ದೃಷ್ಟಿಕೋನಗಳಲ್ಲಿ ಹಿಂದಿನ ಕಾವ್ಯ ಪ್ರಕಾರವನ್ನು ಹೋಲದೆ, ಮುಂದಿನ ಬರವಣಿಗೆಯ ಮೇಲೆ ತನ್ನ ಪ್ರಭಾವ ಬೀರುವ ವಿನೂತನ ಸಾಹಿತ್ಯ ಪ್ರಕಾರ ಎಂದು ಗುರುತಿಸಿಕೊಂಡಿದೆ. ವಚನ ವ್ಯಕ್ತಿಗೂ, ಲೋಕಕ್ಕೂ ಉಂಟಾದ ಆಕರ್ಷಣೆ, ವಿಕರ್ಷಣೆಯಲ್ಲಿ ನಿಷ್ಪನ್ನವಾದುದು. ವಚನಕಾರರು ತಾವು ಕವಿಗಳೆಂದು, ರಚಿಸುತ್ತಿರುವುದು ಸಾಹಿತ್ಯವೆಂದು ಎಲ್ಲೂ ಕರೆದು ಕೊಂಡಿಲ್ಲ ಹಾಗು ತಿಳಿದಿಲ್ಲ. ಕಾವ್ಯ ಪರಂಪರೆಯನ್ನು ಮುಂದುವರೆಸುತ್ತಿದ್ದೇವೆ, ಹಿಂದಿನ ಪರಂಪರೆಗೆ ಪ್ರತಿಕ್ರಿಯಿಸುತ್ತಿದ್ದೇವೆ ಎಂದು ಭಾವಿಸಿಯೂ ಇರಲಿಲ್ಲ. ವಚನ ಅವರಿಗರಿವಿಲ್ಲದೆ ಮೂಡಿದ ಅಭಿವ್ಯಕ್ತಿ ಪ್ರಕಾರವಾಗಿದೆ. ಅದನ್ನು ಅರ್ಥಮಾಡಿಕೊಳ್ಳುವುದಕ್ಕಾಗಲಿ, ಸಮರ್ಥಿಸುವುದಕ್ಕಾಗಲಿ, ಗಮನ ನೀಡದೆ ತಮಗೆ ತೋರಿದಂತೆ ಅಭಿವ್ಯಕ್ತಿಸಿದರು, ಕಾವ್ಯ ಲಕ್ಷಣಗಳಿಗೆ ಹೆಚ್ಚು ಗಮನ, ಮಾನ್ಯತೆ ನೀಡಲಿಲ್ಲ ಎನ್ನುತ್ತಾರೆ. ಮೂರನೆ ಲೇಖನದಲ್ಲಿ ವಚನವನ್ನು ಧಾರ್ಮಿಕ, ಸಾಮಾಜಿಕ ಆಂದೋಲನದ ಉಪ ಉತ್ಪನ್ನ ಎಂದು ಗುರುತಿಸುತ್ತದೆ.

ಸಂ. ರಾಘವೇಂದ್ರ ಪಾಟೀಲ :೧೯೯೪: ನವಮೋಘರೂಪಿ :

ಈ ಕೃತಿಯು ಮೊದಲ ಲೇಖನವು ಕಾವ್ಯ ಮೀಮಾಂಸೆಯ ಬಗೆಗಳನ್ನು ಕನ್ನಡ ಕಾವ್ಯ ಮೀಮಾಂಸೆಯ ಸ್ವರೂಪವನ್ನು ಕುರಿತ ವಿಚಾರಗಳನ್ನು ಒಳಗೊಂಡಿದೆ.

ಕಾವ್ಯ, ಕಾವ್ಯಮೀಮಾಂಸೆ, ವಿಮರ್ಶೆ ಪ್ರತ್ಯೇಕ ಹಾಗು ಪೂರಕವಾದಂತ ಸಂಕಥನಗಳೆಂದು ಗುರುತಿಸುತ್ತದೆ. ಕಾವ್ಯ ಮೀಮಾಂಸೆಯಲ್ಲಿ ಚರ್ಚಿತವಾಗುವ ಕವಿ, ಕೃತಿ, ಓದುಗ, ಸಮಾಜದ ಸಂಬಂಧಗಳನ್ನು ಹಾಗು ಸ್ವರೂಪವನ್ನು ಅಭಿವ್ಯಕ್ತಿ ಹಾಗು ಓದಿನ ಪ್ರಕ್ರಿಯೆಯ ಹಿನ್ನಲೆಯಲ್ಲಿ, ಸಸೂರ, ಲ್ಯಾಂಗರ್, ಬಾರ್ತ್ ಚಿಂತನೆಗಳ ಹಿನ್ನಲೆಯಲ್ಲಿ ಡೆಕಾರ್ಟೆ, ನ್ಯೂಟನ್, ಐನಸ್ಟೈನ್ ವಿಚಾರಗಳ ಹಿನ್ನಲೆಯಲ್ಲಿ, ಪಂಪ, ಬೇಂದ್ರೆ, ಅಡಿಗ, ಅಲ್ಲಮ ವಿಚಾರಗಳ ಹಿನ್ನಲೆಯಲ್ಲಿ ಕಾವ್ಯ ಮೀಮಾಂಸೆಯನ್ನು ಗುರುತಿಸುತ್ತ ಕನ್ನಡ ಕಾವ್ಯ ಮೀಮಾಂಸೆಯ ಸ್ವರೂಪವನ್ನು ಅಲ್ಲಮನ ವಚನಗಳ ಮೂಲಕ ಅಭಿವ್ಯಕ್ತಿಯ ಸ್ವರೂಪವನ್ನು ಕಟ್ಟಿಕೊಡಲು ಯತ್ನಿಸುತ್ತಾರೆ. ಹಾಗು ಭಾಷಾಶಾಸ್ತ್ರಜ್ಞ, ಚರಿತ ವಿಜ್ಞಾನಿಗಳ ವಿಚಾರಗಳನ್ನು ಅವುಗಳಲ್ಲಿ ಕಾಣಬಹುದು.

ಮಿತ್ರ. ಅ. ರಾ. : ಶಬ್ದಕಲ್ಪ :

ಈ ಕೃತಿಯಲ್ಲಿ ಶಬ್ದ, ಉಲಿ, ಕಾವ್ಯಾನುಭವ, ಭಿನ್ನಮಾದರಿಯ ವಿಶ್ವಕಲ್ಪನೆಗಳ ಹಿನ್ನಲೆ, ಕವಿಯ ಸ್ವಭಾವ, ವಿಮರ್ಶಕರ ಧೋರಣೆ ಹಾಗು ಸಹೃದಯ ಕುರಿತು ಇರುವಂಥ ವಚನಗಳ ಗುರುತಿಸಿದ್ದಾರೆ.

ಕೀರ್ತಿನಾಥ ಕುರ್ತಕೋಟಿ :೧೯೯೫: ಕನ್ನಡ ಸಾಹಿತ್ಯ ಸಂಗಾತಿ:

ಈ ಕೃತಿಯಲ್ಲಿ ವಚನಕಾರರು, ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ, ವಚನಗಳ ಭಾಷೆ ಮತ್ತು ಸ್ವರೂಪ ಎಂಬ ಲೇಖನಗಳಿದ್ದು, ವಚನಗಳ ಭಾಷೆ ಕುರಿತು ಚರ್ಚಿಸುತ್ತಲೇ, ಕಾವ್ಯ ಮೀಮಾಂಸೆಯ ಪ್ರಮುಖ ಪ್ರಶ್ನೆಗಳನ್ನು ಕುರಿತು ಚರ್ಚಿಸುತ್ತಾರೆ. ಸಮಕಾಲೀನ ಸಂದರ್ಭದ ವಿಚಾರಗಳ ಹಿನ್ನಲೆಯಲ್ಲಿ ಪ್ರಮುಖ ವಚನಕಾರರನ್ನು ನೋಡುತ್ತಾರೆ.

ಮೊದಲ ಲೇಖನದಲ್ಲಿ ''ಶರಣರೆಲ್ಲ ಕೂಡಿಕೊಂಡು ಕಾಲಕಾಲಕ್ಕೆ ತಮ್ಮ ಅನಿಸಿಕೆಗಳನ್ನು ಸ್ವಾನುಭವವನ್ನು, ದರ್ಶನವನ್ನು ವಚನಗಳ ಮೂಲಕ ಅಭಿವ್ಯಕ್ತಿಸಿದರು (೧೪೫. ಪು.ಸಂ.) ಎಂದು ಹೇಳುತ್ತಲೇ, ಕಾವ್ಯ ಸೃಷ್ಟಿ ಅವರ ಉದ್ದೇಶವಾಗಿರಲಿಲ್ಲ, ಹಾಗು ಕಾವ್ಯದ ಬಗ್ಗೆ ನಿಲುವನ್ನು ಎಲ್ಲೂ ತಿಳಿಸಿಲ್ಲ, ಆದರೆ ಸತ್ಯವನ್ನು ಮಾತಿನ ಮೂಲಕವಾಗಿ ಅಭಿವ್ಯಕ್ತಿಸುವಾಗ ಉಂಟಾಗುವ ಸಮಸ್ಯೆ ಕುರಿತು'' ಚಿಂತಿಸಿದ್ದಾರೆ. ಭಾಷೆಯ ಮೂಲಕ ಸಂವಹನ ಸಾಧ್ಯವಿರುವಂತೆ ಅಸಂವಹನವೂ ಸಾಧ್ಯವಿದೆ ಎಂಬಂಥ ಅಂಶವನ್ನು ವಚನಗಳಲ್ಲಿ ಗುರುತಿಸಬಹುದು ಎನ್ನುತ್ತಾರೆ.

ಎರಡನೆಯ ಲೇಖನದಲ್ಲಿ ಬಸವಣ್ಣನ ವಚನ ಭಾಷೆಯ ವಿಶಿಷ್ಟ ಗುಣ ಸತ್ಯ, ಮಿಥ್ಯಗಳ ವಿಂಗಡಿಸುವಲ್ಲಿ ಎಂದು ತಿಳಿಸುತ್ತ ಭಾಷೆಯಲ್ಲಿನ ಅರ್ಥಾಂತರ ಜಗತ್ತಿನಲ್ಲಿಯ ತಿಳುವಳಿಕೆಯ ಗೊಂದಲವನ್ನು ತಿಳಿಸುವಲ್ಲಿ ಪ್ರಮುಖವೆಂದೆನಿಸುತ್ತದೆ ಎಂದು ಗುರುತಿಸುತ್ತಾರೆ. ಇತಿಹಾಸದ ಸಂಪರ್ಕವಿಲ್ಲದ, ಸ್ವಯಂಭೂ ಸತ್ಯದ ತಿಳವಳಿಕೆ ಸಾಧ್ಯವೇನೋ ಆದರೆ ಈ ತಿಳವಳಿಕೆ ಅನುಭವವಾಗಲಾರದು ಎಂಬುದು ಬಸವಣ್ಣನ ವಚನಗಳಲ್ಲಿ ಕಂಡು ಬರುವಂಥ ಅಭಿಮತವಾಗಿದೆ ಎನ್ನುತ್ತಾರೆ.

ಮೂರನೆಯ ಲೇಖನದಲ್ಲಿ ಭಾಷೆಯನ್ನ ವಚನಕಾರರು ನಿರ್ಮಿಸಿದರು ಹಾಗು ತಮಗೆ ಬೇಕಾದ ಅರ್ಥವನ್ನು ಪ್ರಕಟಿಸುವಂತೆ ಮಾಡಿದರು ಎನ್ನುತ್ತಾರೆ. ಹಾಗು ಅಲ್ಲಮನ ಭಾಷೆ ಇಂಥದ್ದಾಗಿದೆ, ಇವನ ವಚನಗಳಲ್ಲಿ ಶಬ್ದಾರ್ಥಗಳ ಅವಿಭಾಜ್ಯತೆ ಕಾಣಲಾಗುವುದಿಲ್ಲ ಎಂದು ತಿಳಿಸುತ್ತಾರೆ.

ನಾಲ್ಕನೆಯ ಲೇಖನದಲ್ಲಿ ಅಕ್ಕಮಹಾದೇವಿ ನಿರಾಕಾರಕ್ಕೆ ನಿರಾಕಾರದ ಆಕಾರವನ್ನ ನೀಡುತ್ತ, ನಿಷೇಧಾತ್ಮಕವಾದದ್ದನ್ನು ಕಣ್ಣಿನ ಬದುಕಾಗಿ ಮಾಡಲು ಪ್ರಯತ್ನಿಸುತ್ತಾಳೆ. ಅದೇ ಅವಳ ವಚನ ಭಾಷೆಯುಕ್ತಿಯ, ಉದ್ದೇಶ ಎನ್ನುತ್ತಾರೆ.

'ವಚನಗಳ ಭಾಷೆ ಮತ್ತು ಸ್ವರೂಪ' ಎಂಬ ಲೇಖನದಲ್ಲಿ ಭಾಷೆಯೊಂದರ ಸ್ವರೂಪ ಕುರಿತು ವಿವೇಚಿಸುತ್ತಾರೆ. ಭಾಷೆಯ ಕ್ಲಿಷ್ಟತೆ, ಸರಳತೆ ಬೇರೊಂದು ತತ್ತ್ವವನ್ನ ಅವಲಂಬಿಸಿದೆ ಎನ್ನುತ್ತಾರೆ. ಕತೆ, ಕಾವ್ಯ, ಪುರಾಣಗಳ ಮುಖಾಂತರ ಜಗತ್ತನ್ನು ಮತ್ತು ಜಗತ್ತನ್ನು ನಡೆಸುವ ಸತ್ಯವನ್ನು ಅರಿವುದಾಗಿದೆ.

ಇದೇ ಭಾಷೆಯ ಪ್ರಮುಖ ಕ್ರಿಯೆ ಆಗಿದೆ. ಭಾಷೆಯ ನ್ಯಾಯ ಅಡಗಿರಬಹುದಾದ ಸತ್ಯವನ್ನು (೧೭೬ ಪು. ೫೦.) ಕಾಣಿಸುವುದೇ ವಚನಕಾರರ ಭಾಷೆಯ ಮುಖ್ಯ ಉದ್ದೇಶವಾಗಿತ್ತು ಎನ್ನುತ್ತಾರೆ.

ಈ ಅಧ್ಯಾಯದಲ್ಲಿ ಉಲ್ಲೇಖಿಸಿರುವ ಬರಹಗಾರರಲ್ಲಿ ಜಿ.ಎಸ್.ಶಿವರುದ್ರಪ್ಪನವರ ವಚನಗಳಲ್ಲಿ ಕಾವ್ಯ ತತ್ತ್ವ, ನವ ಮೆಂಫ ರೂಪಿಯಲ್ಲಿನ ಓ. ಎಲ್. ನಾಗಭೂಷಣ ಸ್ವಾಮಿಯವರ ಲೇಖನ, ಮರುಚಿಂತನೆಯ ಕೆ. ಜಿ. ನಾಗರಾಜಪ್ಪನವರ ಲೇಖನ, ಕನ್ನಡ ಸಾಹಿತ್ಯ ಸಂಗಾತಿಯಲ್ಲಿನ ಕೀರ್ತಿನಾಥ ಕುರ್ತಕೋಟಿಯವರ ಲೇಖನಗಳು ಪ್ರಧಾನವಾಗಿ ವಚನಗಳಲ್ಲಿ ಕಂಡು ಬರುವ ಭಾಷೆ ಕುರಿತು ತಿಳಿಸುತ್ತಲೇ ಅವುಗಳ ಮೂಲಕ ಬೆಳೆದಿರುವ ಕಾವ್ಯ ಮೀಮಾಂಸೆಯನ್ನು ಗುರುತಿಸುತ್ತಾ ಸಾಗುತ್ತವೆ. ಅಲ್ಲಿ ಕಂಡು ಬರುವ ಕವಿಯ ಅಭಿವ್ಯಕ್ತಿಯ ಸ್ವಾತಂತ್ರ್ಯ ಕುರಿತ ವಿಚಾರವಾಗಿರಲಿ, ಓದಿನ ಬಗೆಗಿನ ಮೂಲಕ ಸಹೃದಯನ ಕುರಿತ ವಿಚಾರವಾಗಿರಲಿ, ಭೌತಶಾಸ್ತ್ರದ, ಭಾಷಾವಿಜ್ಞಾನದ ಚಿಂತನೆಗಳ ಮೂಲಕ ಕವಿ, ಕೃತಿ, ಸಹೃದಯ, ಸಂಬಂಧಗಳನ್ನು ಗುರುತಿಸುವ ವಿಚಾರಗಳಾಗಿರಲಿ, ಭಾಷೆಯ ಪೂರ್ವವಾಸನೆ ಇಲ್ಲದಂತೆ ಶುಚಿಗೊಳಿಸಿ, ಭಾಷೆಯಾಚೆಗಿನ ಸತ್ಯವನ್ನು ತೋರಿಸಬೇಕೆಂಬ ವಿಚಾರವಾಗಿರಲಿ ಎಲ್ಲವೂ ಕನ್ನಡ ಕಾವ್ಯ ಮೀಮಾಂಸೆಯನ್ನು ಕಟ್ಟಿಕೊಂಡುವಂಥ ಅಂಶಗಳೆಡೆ ಬೆಳಕು ಚೆಲ್ಲುತ್ತವೆ.

## ಉಲ್ಲೇಖಗಳು


೧. ಶ್ರೀನಿವಾಸ ಮೂರ್ತಿ: ವಚನ ಧರ್ಮಸಾರ:

೨. ಎಂ.ವಿ. ಸೀತಾರಾಮಯ್ಯ: ಕವಿರಾಜಮಾರ್ಗ:

೩. ಎಂ.ವಿ. ಸೀತಾರಾಮಯ್ಯ: ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ:

೪. ಚಿದಾನಂದ ಮೂರ್ತಿ: ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ:

೫. ಜಿ.ಎಸ್. ಶಿವರುದ್ರಪ್ಪ: ವಚನಗಳಲ್ಲಿ ಕಾವ್ಯ ತತ್ತ್ವ:

೬. ಕೆ.ಜಿ.ನಾಗರಾಜಪ್ಪ :ಮರುಚಿಂತನೆ:

೭. ವಿ. ಸೀತಾರಾಮಯ್ಯ :ಬಸವೇಶ್ವರ:

೮. ಜಿ.ಎಸ್. ಶಿವರುದ್ರಪ್ಪ :ಬೆಡಗು:

೯. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ:ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ (ಲೇ.ಕನ್ನಡ ಕಾವ್ಯ ಪರಂಪರೆ: ಸಂಸ್ಕೃತ ಕಾವ್ಯ ಮೀಮಾಂಸೆ(ಸಂಬಂಧ-ಸಂಘರ್ಷದ ನೆಲೆಗಳು)):

೧೦. ಜಿ.ಎಸ್. ಶಿವರುದ್ರಪ್ಪ :ಕನ್ನಡ ಕವಿಗಳ ಕಾವ್ಯ ಕಲ್ಪನೆ:

೧೧. ಜಿ.ಎಸ್. ಶಿವರುದ್ರಪ್ಪ : ಸಮಗ್ರ ಗದ್ಯ, ಸಂ. ೧:

೧೨. ರಾಘವೇಂದ್ರ ಪಾಟೀಲ (ಸಂ.):ನವಮೋಘ ರೂಪ(ಲೇ. ಉಲಿಯ ಉಯ್ಯಲೆ):

೧೩. ಅ.ರಾ. ಮಿತ್ರ : ಶಬ್ದಕಲ್ಪ:

೧೪. ಕೀರ್ತಿನಾಥ ಕುರ್ತಕೋಟಿ: ಕನ್ನಡ ಸಾಹಿತ್ಯ ಸಂಗಾತಿ:

## ಅಧ್ಯಾಯ-೩

## ಕನ್ನಡ ಕಾವ್ಯಮೀಮಾಂಸೆಯ ಮುಖ್ಯ ಲಕ್ಷಣಗಳು

ಈ ಅಧ್ಯಾಯವು ಕನ್ನಡ ಸಾಹಿತ್ಯ ಚಿಂತನೆಯು ಭಾರತೀಯ ಕಾವ್ಯಮೀಮಾಂಸೆಗಿಂತಲೂ ಭಿನ್ನವಾದ ವಿಚಾರಗಳನ್ನು ಒಳಗೊಂಡಿದ್ದರ ಬಗ್ಗೆ ಅವಲೋಕಿಸುತ್ತದೆ. ಕಾವ್ಯ ಸ್ವರೂಪ, ಕವಿ, ಕೃತಿ, ಓದುಗ ನಡುವಿನ ಸಂಬಂಧಗಳು ಹಾಗು ಅವುಗಳ ಸ್ವರೂಪ ಕುರಿತಂತ ವಿಚಾರಗಳು ಸಂಸ್ಕೃತ ಕಾವ್ಯ ಮೀಮಾಂಸೆಗಿಂತ ಹೇಗೆ ಭಿನ್ನವಾಗಿರುತ್ತದೆ ಎಂಬುದರ ಬಗ್ಗೆಯೂ ಸ್ಥೂಲವಾಗಿ ವಿಶ್ಲೇಷಿಸುತ್ತದೆ.

ಕನ್ನಡ ಕಾವ್ಯದ ಸ್ವರೂಪವು, ಸಂಸ್ಕೃತ ಕಾವ್ಯ ಪರಂಪರೆ ಹಾಗು ಪೂರ್ವದ ಕನ್ನಡ ಸಾಹಿತ್ಯ ಪರಂಪರೆಯೊಂದಿಗೆ ಕನ್ನಡ ಕವಿಗಳ ಸಂಬಂಧ ಹಾಗು ತೋರಿದ ಪ್ರತಿಕ್ರಿಯೆಗಳ ಹಿನ್ನಲೆಯಲ್ಲಿ ರೂಪಿತವಾಗಿದೆ. ಕನ್ನಡ ಸಾಹಿತ್ಯ ಸ್ವರೂಪವು ಪಂಪನ 'ಮೆಯ್ಗಡಲೀಯದೆ', ಕು.ವೆಂ.ಪು. ರ 'ಕನ್ನಡ ಬೇರೆ ಕತೆಯೆಂಬಂತೆ ಬೇರೆ ಮುಯ್ಯಿಯಾಂತಂತೆ ಮರುವುಟ್ಟು ಪಡೆದಂತೆ' ಎಂಬಂತಹ ರೀತಿಯಲ್ಲಿ ಮೂಡಿದೆ. (ಜಿ.ಎಸ್. ಶಿವರುದ್ರಪ್ಪ: ಕನ್ನಡ ಕಾವ್ಯ ಕಲ್ಪನೆ: ಪು.೨)

ಕಾವ್ಯಮೀಮಾಂಸೆ, ಕಾವ್ಯದ ಚರ್ಚೆ ಬೇರೆ ಬೇರೆಯಾಗಿಯೇ ಸಂಸ್ಕೃತ ಸಾಹಿತ್ಯ ಪರಂಪರೆಯಲ್ಲಿ ಬೆಳೆದರೆ, ಕನ್ನಡದಲ್ಲಿ ಕಾವ್ಯದ ಅಂಗವಾಗಿ ಕಾವ್ಯ ಚರ್ಚೆ ನಡೆದಿದೆ. ಹಳಗನ್ನಡ ಕಾವ್ಯ ಪೀಠಿಕಾ ಪ್ರಕರಣಗಳಲ್ಲಿ ಕಾವ್ಯ ಕಲ್ಪನೆ ಕುರಿತ ವಿಚಾರಗಳಿದ್ದು, ಸೃಜನ ಶೀಲತೆಯ ಭಾಗವಾಗಿಯೆ ಕಾವ್ಯ ಚರ್ಚೆ

ಬರುತ್ತದೆ. ಕಾವ್ಯದ ಭಾಗವಾಗಿಯೇ ಕವಿ, ಕಾವ್ಯ ಚರ್ಚೆ, ಸತ್ಕವಿ ಪ್ರಶಂಸೆ, ಕುಕವಿನಿಂದೆ ಕನ್ನಡ ಕಾವ್ಯದಲ್ಲಿ ಕಂಡು ಬಂದಿದೆ. ಕಾವ್ಯಾಂತರ್ಗತ ಕಾವ್ಯ ಚರ್ಚೆ ಜಿನಸೇನಾಚಾರ್ಯರ ಪೂರ್ವ ಪುರಾಣದಿಂದಲೇ ಆರಂಭವಾಗಿದ್ದರೂ ಈ ಸಂಪ್ರದಾಯ ಸಂಸ್ಕೃತ ಕಾವ್ಯ ಪರಂಪರೆಯಲ್ಲಿ ಕಾಣಲಾಗದು. ಪಂಪ ತನ್ನ ಎರಡು ಕೃತಿಗಳಲ್ಲಿ ಮೊದಲ ಬಾರಿಗೆ ಕನ್ನಡದಲ್ಲಿ ಈ ಸಂಪ್ರದಾಯ ಹುಟ್ಟುಹಾಕಿದನು.

ಕಾವ್ಯವನ್ನು ಕುರಿತ ಚರ್ಚೆ ನಾಟಕಾನುಭವದ ಮೂಲಮಾನದಲ್ಲೇ ನಡೆಯಿತು. ಕಾವ್ಯವನ್ನ ದೃಶ್ಯ ಮತ್ತು ಶ್ರವ್ಯ ಎಂದು ವಿಭಾಗಿಸಿ, ನಾಟಕವನ್ನು ದೃಶ್ಯ ಕಾವ್ಯ ಎಂದು ಸಂಸ್ಕೃತ ಕಾವ್ಯ ಮೀಮಾಂಸೆಯಲ್ಲಿ ಪರಿಗಣಿಸಲಾಯಿತು.

ಕನ್ನಡ ಕಾವ್ಯ ಸಂದರ್ಭದಲ್ಲಿ ಕಾವ್ಯ ಕೇಂದ್ರಿತವಾಗಿಯೇ ಕಾವ್ಯ ಚರ್ಚೆ ಬೆಳೆಯಿತು. ಕನ್ನಡ ಕಾವ್ಯದಲ್ಲಿ ಕಂಡು ಬರುವ ಪೂರ್ವ ಕವಿಗಳ ಸ್ಮರಣೆ ಹಾಗು ಸ್ವಕಾವ್ಯದ ಪ್ರಶಂಸೆ, ಕವಿಗಿರಬೇಕಾದ ಗುಣಗಳು ಹಾಗು ಕವಿಯು ಕುರಿತು ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದರೆ, ಸ್ವಕಾವ್ಯ ಪ್ರಶಂಸೆ ಕಾವ್ಯ ಕುರಿತ ಕಲ್ಪನೆಗಳು, ನಿಜವಾದ ಕಾವ್ಯ ಹೇಗಿರಬೇಕು ಎಂಬ ವಿಚಾರಗಳನ್ನು ಕುರಿತು ತಿಳಿಸುತ್ತದೆ.

'ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆನೆ
ಕವಿ ವ್ಯಾಸನೆ ಎಂಬ ಗರ್ವಮೆನಗಿಲ್ಲ',
'ಮುಂ ಸಮಸ್ತ ಭಾರತಮನ
ಅಪೂರ್ವಮಾಗೆಪೇಳ್ದ ಕವೀಶ್ವರರ್ ಇಲ್ಲ'

ಎಂಬ ಪಂಪನ ಈ ವಾಕ್ಯಗಳು ಕವಿಗಿರಬೇಕಾದ ವಿನಯ, ಪರಂಪರೆಯ ಪ್ರಜ್ಞೆ, ಹಾಗು ಸ್ವಂತಿಕೆಯನ್ನು ರೂಪಿಸಿಕೊಳ್ಳುವ ಶಕ್ತಿ ಕುರಿತು ತಿಳಿಸಿದರೂ, ಸಮಸ್ತ ಭಾರತ ಎಂಬ ತಂತ್ರದಲ್ಲಿ ತನ್ನ ಕೃತಿಯ ಅನನ್ಯತೆ ಸೂಚಿಸುತ್ತಾನೆ. ಹೀಗಾಗಿ ಪೂರ್ವ ಕವಿಗಳ ಸ್ಮರಣೆಯು ಸಂಪ್ರದಾಯವೊಂದು ಮೂಡಿತು.

''ಅಸಗನ ದೇಸಿ, ಪೊನ್ನನ ಮಹೋನ್ನತಿವೆತ್ತ ಬೆಡಂಗು ......
ಗುಣವರ್ಮನ ಜಾಣ್, ಕವಿರತ್ನನ ಓಜ ''

ತನ್ನ ಕೃತಿಯಲ್ಲಿ ನೆಲೆಸಲಿ ಎಂದು ನಯಸೇನನು ಧರ್ಮಾಮೃತದಲ್ಲಿ ಹೇಳಿದ್ದಾನೆ.

----------

'' ಎಸಗ ಅಸುಕೋಲಮಕ್ಕೆ ಗುಣವರ್ಮನ ಜಾಣ್ನುಡಿ, ಪಂಪನ ಇಂಪು,

ಪೊನ್ನನ ಬಗೆ......... ಪುಷ್ಪ ಬಾಣನ ಮೃದು ಬಂಧ''

ಕೃತಿರಚನೆಯಲ್ಲಿ ನೆರವಾಗಲಿ ಎಂದು ಜನ್ನನು ಅನಂತನಾಥಪುರಾಣದಲ್ಲಿ ಹೇಳಿದ್ದಾನೆ.

(ಜಿ.ಎಸ್.ಶಿವರುದ್ರಪ್ಪ:ಕನ್ನಡ ಕವಿಗಳ ಕಾವ್ಯ ಕಲ್ಪನೆ:ಪು.೧೬-೧೭)

ಮೇಲಿನ ಕವಿಗಳ ಕಾವ್ಯದ ಸಾಲುಗಳು ಪೂರ್ವಕವಿಗಳ ಕಾವ್ಯ ಲಕ್ಷಣ ತಿಳಿಸುತ್ತಲೇ, ಕಾವ್ಯ ಚರ್ಚೆ ಎಂಬುದು ಸಾಹಿತ್ಯ ಪರಂಪರೆಯೊಂದರಲ್ಲಿ ಬೆಳೆಯುವಂಥದ್ದು ಎಂಬುದನ್ನು ತಿಳಿಸುತ್ತದೆ.

''ಅವರಿವರ ಮಾತುಗಳನ್ನು ನೆನೆನೆದು ತನ್ನ ಕೃತಿಯಲ್ಲಿಡುವವನ ಕೃತಿ

ಗುಹಾಧ್ವನಿಯು ಹಾಗೆ ಅರ್ಥಹೀನವಾದ ವಚನಗಳನ್ನುಳ್ಳದ್ದಾಗುತ್ತದೆ''

ಎಂದು 'ಕವಿರಾಜಮಾರ್ಗಕಾರನು' ಹೇಳುತ್ತಾನೆ.

'' ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ ''

-ಕುಮಾರವ್ಯಾಸ

''ಪರರೊಡವೆಯು ಕೊಂಡು ಪೇಳದ ಭಾಷೆ ಅಥವಾ ಪ್ರತಿಜ್ಞೆ ತನ್ನದು''

ರಾಘವಾಂಕ, ಹರಿಶ್ಚಂದ್ರ ಕಾವ್ಯ

'' ಪೆರರ ನುಡಿ, ಪೆರರ ಮಾರ್ಗಂ, ಪೆರರರ್ಥ, ಪೆರರ ದೇಸಿ,

ಪೆರರ ಓಜೆಯೆನಲ್, ಪೆರರ ಬಳಿಸಂದು ತನ್ನ ಮರೆವಂ ಕವಿಯಲ್ಲಂ''

ನಾಗಚಂದ್ರ : ಮಲ್ಲಿನಾಥ ಪುರಾಣ (ಜಿ.ಎಸ್. ಶಿವರುದ್ರಪ್ಪ:೧೯೮೯:ಪು.೧೯)

ಮೇಲಿನ ಅನೇಕ ಕವಿಗಳ ಸಾಲುಗಳು ಸ್ವಕಾವ್ಯ ಪ್ರಶಂಸೆ, ಕೃತಿಯ ಅನನ್ಯತೆಯನ್ನು ತಿಳಿಸುತ್ತವೆ. ಹಾಗು ವ್ಯಕ್ತಿ ವಿಶಿಷ್ಟಾಭಿವ್ಯಕ್ತಿಯನ್ನು ಸಾಧಿಸುವ ಅಪೇಕ್ಷೆಯನ್ನು ತಿಳಿಸುತ್ತದೆ. ಇವುಗಳೇ ಕನ್ನಡ ಕಾವ್ಯದ ಪ್ರಮುಖ ಲಕ್ಷಣ ಎಂಬಂಥ ರೀತಿಯಲ್ಲಿರುವುದನ್ನು ಗಮನಿಸಬೇಕು.

ಕಾವ್ಯವೆಂಬುದು ಎಲ್ಲ ಕವಿಗಳಿಗೂ ಸಮಾನವಾದ ಭಾಷಾಮಾಧ್ಯಮದಿಂದಲೇ ಹುಟ್ಟಿದರೂ, ಆಯಾ ಕವಿಯ ವಿಚಕ್ಷಣತೆಯಿಂದ, ಪ್ರತಿಭೆಯಿಂದ ಬೇರೆ ಬೇರೆಯಾಗುತ್ತದೆ ಎಂಬ ಅಂಶಗಳನ್ನು ಹಾಗು ಸರಸ್ವತಿ

ಕುರಿತ ವರ್ಣನೆಯು ಕನ್ನಡಿಗರ ಕಾವ್ಯತತ್ತ್ವದ ವಿಚಾರಗಳನ್ನು ಒಳಗೊಂಡಿರುವಂಥದ್ದನ್ನು ಈ ಕೆಳಗಿನ ಕೆಲವು ಕವಿಗಳ ಕಾವ್ಯದ ಸಾಲುಗಳನ್ನು ಗಮನಿಸುವುದರ ಮೂಲಕ ತಿಳಿಯಬಹುದು.

'' ಇದು ನಿಚ್ಚಂ ಪೊಸತು ಅರ್ಣವಂಬೋಲತಿ ಗಂಭೀರಂ ಕವಿತ್ವಂ'' - ಪಂಪ.

'' ಪರಮ ಜಿನೇಂದ್ರ ವಾಣಿಯೆ ಸರಸ್ವತಿ ಬೇರದು ಪೆಣ್ಣರೂಪಮಂ ಧರಿಯಿಸಿ
ನಿಂದುದಲ್ತು''. - ಪಂಪ, ಆದಿಪುರಾಣ.

---------

'' ಕವಿತಾ ಶಕ್ತಿ ಸುರೇಂದ್ರಧೇನು ಅದು ಪುಣ್ಯಾಯತ್ತಂ ''

- ಜನ್ನ ಅನಂತನಾಥಪುರಾಣ.

-------------

'' ಮಳೆಯಿಲ್ಲದೆ ಪೊಯನ್ನರಿಂ ಬೆಳೆಗುಮೆಧರೆ''

- ನಯಸೇನ, ಧರ್ಮಾಮೃತ.

----------

'' ಸರ್ವಾಂಗ ಸುಂದರಿ ವಿದ್ಯಾನಟಿ ನಾಟಕಂ - ನಲಿಗೆ - ಮತ್ಕಾವ್ಯಸ್ಥಲೀ ರಂಗದೊಳ್
ಜನವಿಲೋಚನ ಪ್ರತಿಮ ಪ್ರಭಾವರಪ್ಪದಿ ಕವೀಶ್ವರರ ''

- ನಾಗಚಂದ್ರ.

'' ವಚಶ್ರೀ ನರ್ತಶ್ರೀ ನೃತ್ಯವೇದಿಕೆ ''

- ನೇಮಿಚಂದ್ರ.

''ಕಲಿಸಿದೊಡೇಂ ಬರ್ಕುಮೆ ಸಲ್ಲಲಿತ ಕವಿತ್ವಂ ನಿಸರ್ಗ ಸುಭಗಂ''

- ಷಡಕ್ಷರಿ, ರಾಜಶೇಖರ ವಿಳಾಸ (ಜಿ.ಎಸ್.ಶಿವರುದ್ರಪ್ಪ:೧೯೮೯:ಪು.ಸಂ.೨೩)

---------------

ಪ್ರತಿಭೆ ಅಥವಾ ಕವಿತಾ ಶಕ್ತಿ ಕುರಿತ ಭಾರತೀಯ ಮೀಮಾಂಸಕರ ವಿಚಾರಗಳಿಗೆ ಪೂರಕವಾಗಿ ನಮ್ಮ ಕವಿಗಳ ವಿಚಾರಗಳನ್ನು ಕಾಣಬಹುದು. ಆದರೆ ಕನ್ನಡ ಕವಿಗಳ ಕಾವ್ಯ ಕಲ್ಪನೆ ಸರಸ್ವತಿ ತತ್ತ್ವದಲ್ಲಿ ಕಂಡು ಬಂದರೂ ಕೆಲವು ಕವಿಗಳಲ್ಲಿ ವೈದಿಕರ ಸರಸ್ವತಿ ಕಲ್ಪನೆಯ ವಿರೋಧದಲ್ಲಿಯೂ

ಕಂಡು ಬಂದಿರುವುದು ಕಾಣಬಹುದು. ಈ ಕಲ್ಪನೆ ಭಾರತೀಯ ಕಾವ್ಯಮೀಮಾಂಸಕರ ಕಾವ್ಯ ಚಿಂತನೆಗಳಿಂದ ಭಿನ್ನವಾದುದು.

'ಇದು ನಿಚ್ಚಂ ಪೊಸತು' ಎಂಬುದು ಕಾವ್ಯದ ಗಂಭೀರತೆ, ಆಳ, ಮೌಲಿಕತೆಯನ್ನು ವ್ಯಕ್ತಪಡಿಸುವುದು ನೋಡಬಹುದು. ಕಾವ್ಯ, ನಾಟಕದ ತಿರುಳು ಒಂದೇ, ಕಾವ್ಯ ಎಂಬುದು ವಾಸ್ತವವಾಗಿ ನಾಟಕ ಅಥವಾ ದೃಶ್ಯ ಕಾವ್ಯ ಎಂಬುದನ್ನು ನಾಗಚಂದ್ರ, ನೇಮಿಚಂದ್ರರು ವ್ಯಕ್ತಪಡಿಸುತ್ತಾರೆ. ಹಾಗು ಇಲ್ಲಿಯೇ ಜನಾಂತರ ದೃಷ್ಟಿ ಎಂಬ ಪದವನ್ನು ಬಳಸುತ್ತಾರೆ. ಜನಸಮುದಾಯದಲ್ಲಿ ಸುಪ್ತವಾಗಿರುವ ದೃಷ್ಟಿ, ಅಥವಾ ಒಂದು ಯುಗದ ಜನತೆಯ ಅಂತರಾಳವನ್ನು ಕೃತಿಯ ಮೂಲಕ ಅಭಿವ್ಯಕ್ತಿಸುವ ಕವಿಯ ದೃಷ್ಟಿ ಎಂದರ್ಥ. ಈ ವಿಚಾರಗಳು ಭಾರತೀಯ ಕಾವ್ಯಮೀಮಾಂಸೆಗೆ ಅಪರಿಚಿತವಾದುದು.

ಕಾವ್ಯ ಸತ್ಯ, ಅಷ್ಟಾದಶ ವರ್ಣನೆಗಳನ್ನು ಕನ್ನಡ ಕಾವ್ಯ ಪರಂಪರೆಯಲ್ಲೂ ಕಾಣಬಹುದು. 'ಅಷ್ಟಾದಶ ವರ್ಣನೆಯನ್ನು ಅಶ್ರದ್ಧಾಪೂರ್ವಕವಾಗಿ ಬಳಸಿದ್ದಾರೆ', ೧೨ನೇ ಶತದಿಂದಾಚೆ ಹರಿಹರ, ರಾಘವಾಂಕ, ವಿರೂಪಾಕ್ಷ ಪಂಡಿತ ಇದರ ವಿರುದ್ಧವಾಗಿ ಪ್ರತಿಕ್ರಿಯೆ ವ್ಯಕ್ತ ಪಡಿಸಿದ್ದಾರೆ. ಕಾವ್ಯದಲ್ಲಿ ಎಂಬುದು ಪ್ರತಿಭಾಸಿಕ ಸತ್ಯವಾಗಿರುತ್ತದೆ.

ಕಾವ್ಯ ಅನ್ನುವುದು ಕವಿಯ ಶಾಸನಕ್ಕೆ ಒಳಗಾದ ಅಧಿಪತ್ಯ ಎನ್ನುತ್ತಾನೆ. ಹರಿಹರ ಹಾಗು ''ಕಾವ್ಯಂ ಕಲ್ಪಾಂತರ ಸ್ಥಾಯಿಯೆನಿಪ ಮತಿ ಸತ್ಯಂ, ಕವೀಶಾಧಿಪತ್ಯಂ'' ಎಂದೂ ತಿಳಿಸುತ್ತಾನೆ. ಈ ವಾಕ್ಯಗಳು ಕವಿಗಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹಾಗು ಓದುಗನ ದೃಷ್ಟಿ, ಕುರಿತಂಥ ವಿಚಾರಗಳನ್ನು ತಿಳಿಸುತ್ತದೆ.

ಕನ್ನಡ ಕಾವ್ಯದಲ್ಲಿ ಬರುವ ವಸ್ತುಕ- ವರ್ಣಕಗಳೆಂಬ ಕಾವ್ಯ ಪ್ರಭೇದಗಳ ಸಂಗತಿ ಸಂಸ್ಕೃತ ಲಾಕ್ಷಣಿಕರಲ್ಲಿರದ ಕಾರಣ ಈ ವಿಚಾರ ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡಿಗರ ಕೊಡುಗೆಯಾಗಿದೆ. ಈ ಪ್ರಭೇದಗಳು ನಿರ್ದಿಷ್ಟವಾಗಿ ಏನನ್ನು ಸೂಚಿಸುತ್ತದೆ ಎಂಬುದರ ಬಗ್ಗೆ ಖಚಿತ ನಿಲುವಿಲ್ಲದಿದ್ದರೂ ಅದರ ವೈಶಿಷ್ಟ್ಯವನ್ನು ಅರಿಯಬಹುದು.

ಕನ್ನಡ ಕಾವ್ಯಗಳ ವಸ್ತುವೂ ಕೂಡಾ ಕವಿ - ಕಾವ್ಯ ಕುರಿತಂತ ವಿಚಾರಗಳನ್ನು ವ್ಯಕ್ತಪಡಿಸುತ್ತವೆ. ಸಂಸ್ಕೃತ ಕಾವ್ಯ ಪರಂಪರೆಯಲ್ಲಿ ಕಾಣದ ವೈಶಿಷ್ಟ್ಯಗಳನ್ನು ಕಾಣಬಹುದು. ಮಹಾಭಾರತ, ರಾಮಾಯಣ, ಜೈನ, ಶೈವ, ವಿಷ್ಣು ಪುರಾಣಗಳು ಕನ್ನಡ ಕಾವ್ಯ ಪರಂಪರೆಯನ್ನು ನಿಯಂತ್ರಿಸಿವೆ. ಹಾಗು ಕನ್ನಡ ಕಾವ್ಯ ಪರಂಪರೆಯು ಕಥನ ಸಂಪ್ರದಾಯವನ್ನು ಒಳಗೊಂಡಿದೆ. ಕನ್ನಡದ ಕಾವ್ಯದಲ್ಲಿ ವೈದಿಕರ ಚಾತುರ್ ವರ್ಣದ ಕಲ್ಪನೆಗಳು ತಲೆಕೆಳಗಾಗಿದ್ದು ವಿಭಿನ್ನವಾಗಿ ಅಭಿವ್ಯಕ್ತವಾಗಿವೆ. ಮಹಾಭಾರತ ಕಥಾವಸ್ತುವಿಗೆ ಪ್ರಾದೇಶಿಕತೆಯಲ್ಲಿ ಸಮೀಕರಣ ಕಂಡುಕೊಳ್ಳಲಾಗಿದೆ. ಲೌಕಿಕ, ಆಗಮಿಕ ಎಂಬ ದ್ವಿಕಾವ್ಯ ಪದ್ಧತಿ ಕನ್ನಡದ ವೈಶಿಷ್ಟ್ಯವಾಗಿದ್ದು ಸಂಸ್ಕೃತ ಕಾವ್ಯ ಪರಂಪರೆಯಲ್ಲಿ ಕಾಣಲಾಗುವುದಿಲ್ಲ.

ಪ್ರಾದೇಶಿಕ ವಸ್ತು, ವ್ಯಕ್ತಿ, ಕಾಲ, ದೇಶಗಳನ್ನು ಪೌರಾಣಿಕ ಹಾಗು ಸಾರ್ವತ್ರಿಕ ನೆಲೆಗಳಿಗೆ ಏರಿಸುತ್ತಾ, ಮಹಾಭಾರತ, ರಾಮಾಯಣಗಳ ಕಥಾವಸ್ತು, ನಾಯಕರುಗಳನ್ನು, ಕಾಲ, ದೇಶಗಳನ್ನು ಸ್ಥಳೀಯ ಹಾಗು ನಿರ್ದಿಷ್ಟ ಪ್ರಾದೇಶಿಕ ಮೂಲಗಳಿಗೆ ಇಳಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಕವಿಗಳು ತಮ್ಮ ವಿಚಾರ ಮತ್ತು ದ್ವಂದ್ವಗಳನ್ನು ಅಳವಡಿಸಿರುವುದನ್ನು ಕಾಣಬಹುದು. ವಸ್ತು ನಿರ್ವಹಣೆಯ ಈ ದೃಷ್ಟಿಕೋನ ಕನ್ನಡ ಕವಿಗಳ ಕಾವ್ಯ ಕಲ್ಪನೆಯ ವಿಶಿಷ್ಟ ಅಂಶವಾಗಿದೆ.

ಕಥಾ ವಸ್ತುವಿನ ನಿರ್ವಹಣೆಯಲ್ಲಿ ತೋರಿದ ಸ್ವಾತಂತ್ರ್ಯವು ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೇ ಸೂಚಿಸುತ್ತದೆ.

> 'ಪೆರರೀವುದೇಂ, ಪೆರರ ಮಾಡುವುದೇಂ, ಪೆರರಿಂದಮಪ್ಪುದೇಂ' - ಪಂಪ
>
> 'ಎರಗುವೆನ ಅರುಹಂಗೆ, ಉಳಿದವರ್ಗೆರಗೆಂ' - ಆಂಡಯ್ಯ.
>
> 'ಹರನಲ್ಲದನ್ಯ ದೈವಗಳಿಗೆರಗದ ಭಾಷೆ ತನ್ನದು' - ರಾಘವಾಂಕ.

ಮೇಲಿನ ಅನೇಕ ಸಾಲುಗಳು ಕವಿಯ ವ್ಯಕ್ತಿತ್ವಕ್ಕೆ ಇರಲೇಬೇಕಾದ ಸ್ವಾತಂತ್ರ್ಯ [illegible] ಕವಿಯ [illegible]

ಕೃತಿಗೂ, ಕವಿಗೂ ನಡುವೆ ಅಭೇದ್ಯತೆ ಹಾಗು ವ್ಯಕ್ತಿ ನಿರಸನ ಹಾಗೂ ಕವಿ ದಿವ್ಯಶಕ್ತಿಯು ಅಧೀನ ಸಂಬಂಧ ಅಂಶಗಳು ಕಂಡುಬರುತ್ತವೆ.

ಕಾವ್ಯ ಸತ್ಯ, ಆಸ್ವಾದಕವರ್ಣನೆಗಳೊಂದಿಗೆ, ಶೈಲಿಯು ಕುರಿತು ಕನ್ನಡ ಕವಿಗಳು ತಮ್ಮದೇ ಆದ ನಿಲುವುಗಳನ್ನು ಹೊಂದಿದ್ದರು. ಭಾರತೀಯ ಕಾವ್ಯ ವಿಮರ್ಶೆಯಲ್ಲಿ ಇದರ ಚರ್ಚೆ ಕಂಡು ಬರುವುದಿಲ್ಲ. ಆದರೆ ಪ್ರಾದೇಶಿಕ ಭಾಷಾವೈಲಕ್ಷಣ್ಯಗಳಿಗನುಗುಣವಾಗಿ ರೀತಿ ಭೇದಗಳನ್ನು ಗುರುತಿಸುತ್ತಾರೆ. ''ಕನ್ನಡ ಕವಿಗಳು ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಕ್ಕೆ ತಮ್ಮ ಕೃತಿ ರಚನೆಯ ಸಂದರ್ಭದಲ್ಲಿ ತೋರಿದ ಕ್ರಿಯೆ ಪ್ರತಿಕ್ರಿಯೆಗಳೇ ಶೈಲಿಯ ಸ್ವರೂಪ ಹಾಗೂ ಸಮಸ್ಯೆಯನ್ನು ಪ್ರಕಟಿಸುತ್ತದೆ'' ಎಂದು ಜಿ.ಎಸ್. ಶಿವರುದ್ರಪ್ಪ ಹೇಳುತ್ತಾರೆ. ಕನ್ನಡ ಕವಿಗಳ ಪ್ರತಿಕ್ರಿಯೆಗಳನ್ನು ಮೂರು ಬಗೆಯಾಗಿ ಗುರುತಿಸಬಹುದು.

೧- ಸಂಸ್ಕೃತವನ್ನು ಕನ್ನಡ ಕಾವ್ಯ ರಚನೆಗೆ ಆತಂಕವೆಂದು ಭಾವಿಸದೆ ಅನುಕೂಲವೆಂದು ತಿಳಿದ ಪ್ರೌಢಕವಿಗಳ ಧೋರಣೆ. ಇದರಿಂದ ನಿಷ್ಪನ್ನವಾದ ರೀತಿಯನ್ನೇ ಮಾರ್ಗವೆಂದು ಕರೆಯಬಹುದು.

೨- ಕನ್ನಡಕ್ಕೆ ಅದರದೇ ಆದ ಸತ್ವವಿರುವಾಗ, ಅದು ನುಡಿಗೆ ಸಹಜವಾದ ರೀತಿಯಲ್ಲಿ ಕಾವ್ಯ ಭಾಷೆಯನ್ನು ರೂಪಿಸಿ ಕೊಳ್ಳುವುದು. ಇದನ್ನು ದೇಸಿಯೆಂದು ಕರೆಯಬಹುದು.

೩. ಕನ್ನಡದಂತೆ ಸಂಸ್ಕೃತವೂ ನಮ್ಮದು, ಕನ್ನಡದ ಸೊಗಸು ಹಾಳಾಗದಂತೆ ನೋಡಿ ಕೊಳ್ಳುತ್ತಲೇ ಸಂಸ್ಕೃತದ ಪ್ರೌಢಿಮೆ, ಆಡುನುಡಿಯೊಂದಿಗೆ ಒಡಂಬಡಿಕೆ ಸಾಧಿಸುವುದು. ಇದು ಮಾರ್ಗ, ದೇಸಿಗಳ ಸಮನ್ವಯ ಶೈಲಿ.

ಶ್ರೀ ವಿಜಯನು ಹೇಳುವ ''ನಾಳ್ನುಡಿಯ ಬೆಡಂಗು'',

ಪಂಪನು ತನ್ನ ಕೃತಿಯು ''ಸಾಜದ ಪುಲಿಗೆರೆಯ ತಿರುಳಗನ್ನಡದಲ್ಲಿ''

ರೂಪಿತವಾಗಿದೆ ಎಂಬ ಅಂಶಗಳು,

'ನಯಸೇನನು ''ಸಕ್ಕದಮಂ ಪೇಳ್ವೊಡೆ ನೆರೆ ಸಕ್ಕದಮಂ ಪೇಳ್ಗೆ ಶುದ್ಧಗನ್ನಡದೊಳ್ ತಂದಿಕ್ಕುವುದೆ ಸಕ್ಕದಮಂ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ'' ಎಂಬ ಅಭಿಪ್ರಾಯಗಳು ಕನ್ನಡ ಕಾವ್ಯ ಶೈಲಿಯನ್ನು ಕುರಿತು ತಿಳಿಸುತ್ತವೆ.

ಶ್ರೀವಿಜಯ ಆಡು ನುಡಿಯ ಬಳಕೆಯ ಬಗ್ಗೆ, ಭಾಷಾ ಮಿಶ್ರಣದ ಬಗ್ಗೆ ತಿಳಿಸಿದರೆ, ದ್ವಿಭಾಷಿಕ ಸಂದರ್ಭದಲ್ಲಿ ಕಾವ್ಯ ರಚನೆಯಲ್ಲಿ ಸಂಸ್ಕೃತದೊಂದಿಗಿನ ಒಡಂಬಡಿಕೆಯೊಂದಿಗೆ, ಕನ್ನಡದ ದೇಸಿಯತೆಯನ್ನು ಉಳಿಸಿಕೊಳ್ಳುತ್ತಲೇ ಕಾವ್ಯರಚನೆ, ರೀತಿಯನ್ನು ರೂಪಿಸಿಕೊಳ್ಳಬೇಕಾದದ್ದನ್ನು ಪಂಪ ತಿಳಿಸುತ್ತಾನೆ. ಕನ್ನಡಕ್ಕೆ ಅದರದೇ ಆದ ಸತ್ವವಿರುವಾಗ ಈ ರೀತಿಯ ಮಿಶ್ರಣಗಳು ಸರಿಯೇ ಎಂದು ನಯಸೇನ ಪ್ರಶ್ನಿಸುತ್ತಾನೆ. ಈ ಶೈಲಿ ಸ್ವರೂಪ ಕುರಿತ ಚಿಂತನೆಗಳು ಮೂಲಂಗಳು ಒಂದು ರೀತಿಯಲ್ಲಿ ಕನ್ನಡ ಕಾವ್ಯ ಸ್ವರೂಪವನ್ನೇ ತಿಳಿಸುತ್ತವೆ. ಕನ್ನಡ ಕಾವ್ಯ ಚರಿತ್ರೆಯುದ್ದಕ್ಕೂ ಮಾಡಿಕೊಂಡು ಬಂದಿರುವ ಒಡಂಬಡಿಕೆಗಳು,ಅದರ ಮೂಲಕ ಪಡೆದಿರುವ ಸ್ವರೂಪಗಳ ಕುರಿತ ಚರ್ಚೆಯೇ ಆಗಿದೆ ಎನಿಸುತ್ತದೆ.

ಮುಂದಿನ ಕೆಲವು ಪುಟಗಳಲ್ಲಿ ಕವಿ-ಕೃತಿ-ಓದುಗ ಸಂಬಂಧದ ಹಿನ್ನಲೆಯಲ್ಲಿ ಕಾವ್ಯ ಸ್ವರೂಪವನ್ನು ಗುರುತಿಸುವ ಪ್ರಯತ್ನಗಳಿವೆ. ಇದುವರೆಗೆ ಕವಿಗಳು ರಚಿಸಿರುವ ಕೃತಿಗಳ ಕೆಲವು ಮೂಲಂಗಳ ಹಿನ್ನಲೆಯಲ್ಲಿ ಕವಿಯ ಸ್ವರೂಪ, ಕಾವ್ಯದ ಸ್ವರೂಪ ಕುರಿತ ಚಿಂತನೆಗಳನ್ನು ವ್ಯಕ್ತಪಡಿಸಲಾಗಿದ್ದರೆ, ಇಲ್ಲಿ ಕಾವ್ಯಾನುಭವದ ಹಿನ್ನಲೆಯಲ್ಲಿ, ಸಹೃದಯನ ದೃಷ್ಟಿಯ ಹಿನ್ನಲೆಯಲ್ಲಿ, ಸಹೃದಯನ ದೃಷ್ಟಿಯ ಹಿನ್ನಲೆಯಲ್ಲಿ ಕಾವ್ಯದಿಂದುಂಟಾಗುವ ಪ್ರಯೋಜನಗಳ ಹಿನ್ನಲೆಯಲ್ಲಿ ಕಾವ್ಯ ಅಥವಾ ಕೃತಿಯ ಸ್ವರೂಪವನ್ನು ಗುರುತಿಸಲಾಗುತ್ತದೆ. ಸಹೃದಯರನ್ನು ಕುರಿತು ಕನ್ನಡ ಕವಿಗಳಿಗಿದ್ದ ಅಭಿಪ್ರಾಯ ಹಾಗು ಕುಕವಿ, ಕುಕಾವ್ಯದ ನಿಂದನೆಯ ಹಿನ್ನಲೆಯಲ್ಲಿ ಕವಿಯ ಹಾಗು ಕಾವ್ಯದ ಸ್ವರೂಪವನ್ನು ಗುರುತಿಸುವ ಪ್ರಯತ್ನಗಳಿವೆ.

''ಕವಿ ಸಹೃದಯಾಖ್ಯಂ'' ಎಂದು ಕಾವ್ಯತತ್ತ್ವವನ್ನು ಕರೆದಿದ್ದು ಕಾವ್ಯಾನುಭವದ ಚರ್ಚೆಯನ್ನು ಸಹೃದಯಾನುಭವದ ಹಿನ್ನಲೆಯಲ್ಲಿ ಮಾಡಲಾಗಿದೆ. ಕವಿ-ಕೃತಿ-ಓದುಗ ಸ್ವರೂಪ 'ಸಂವಹನೆಯ ಬಗೆಗಳಲ್ಲಿ' ನಿರ್ಧರಿತವಾಗುತ್ತದೆ. ಕಾವ್ಯದ ಅಸ್ತಿತ್ವ ಹಾಗೂ ಸಾರ್ಥಕತೆಗಳೆರಡೂ ಸಹೃದಯನ ಅನಿಸಿಕೆಗಳಲ್ಲಿರುತ್ತವೆ. ಸಹೃದಯ ಕಾವ್ಯವನ್ನು ಮೆಚ್ಚಿದಲ್ಲಿ ಮಾತ್ರ ಕಾವ್ಯ ಪರಿಪೂರ್ಣಗೊಂಡು ಕವಿಯು ಕೃತಾರ್ಥನಾಗುತ್ತಾನೆ.

ಕಟ್ಟಿಯುಮೇನೋ ಮಾಲೆಗಾರನ ಪೊಸ ಬಾಸಿಗಂ

ಕಟ್ಟಿ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೆ

ಜನ್ನ- ಅನಂತನಾಥ ಪುರಾಣ

-------------

ಕವಿಯಧಿಕನಿರ್ದೋಷಂ ಕೇಳ್ವರಿಲ್ಲದೊಡೆ

-ರಾಘವಾಂಕ.

ಪಟ್ಟುಪಾಡೆನಗಿರಲಿ ಅದರ ಹಾಡನಷ್ಟೆ ನೀಡುವೆನು ರಸಿಕ ನಿನಗೆ

ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ ಆ ಸವಿಯು ಉಳಿಸು ನನಗೆ

-ಬೇಂದ್ರೆ

ಮೇಲಿನ ಸಾಲುಗಳು ಸಹೃದಯನ ಕುರಿತದ್ದಾಗಿವೆ. ಈ ಸಹೃದಯರನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು. ೧-ಪಂಡಿತವರ್ಗದ ಕಾವ್ಯಗಳನ್ನು ಆಸ್ವಾದಿಸುವ ಸಹೃದಯವರ್ಗ. ೨-ಬಹುಸಂಖ್ಯಾತ ಅನಕ್ಷರಸ್ಥ ಶ್ರಾವಕ ಸಂಪ್ರದಾಯವರ್ಗ. ಸ್ಥೂಲವಾಗಿ ನಿರೂಪಿಸುವುದಾದರೆ ಕೃತಿಗಳನ್ನು ತಾವಾಗಿಯೇ ಓದಿಕೊಳ್ಳಬಲ್ಲ ಓದುಗ ವರ್ಗ ಹಾಗು ಶ್ರಾವಕ ವರ್ಗ. ಈ ವರ್ಗಗಳೆ ಕನ್ನಡ ಸಾಹಿತ್ಯದ ರೂಪ, ರೀತಿ, ಧೋರಣೆಗಳನ್ನು ನಿರ್ಧರಿಸಿವೆ. ಭಾಷಿಕ ಬರವಣಿಗೆಯ ರೂಪಕಗಳಾದ ಮಾರ್ಗ, ದೇಸಿ ಪರಿಕಲ್ಪನೆಗಳು ಕೂಡಾ ಹಾಗು ಕಾವ್ಯ ಭಾಷೆಯ ಪ್ರೌಢಿಮೆ, ಗೇಯತೆಯ ಲಕ್ಷಣಗಳು ಕೂಡಾ ಸಹೃದಯನಿಂದಲೇ ರೂಪಿತಗೊಂಡವು. ಹೇಳ್ವೊಡೆ ಹಂಪನೆ ಹೇಳ್ಗುಂ ಎಂದವರು ಸಹೃದಯರೆ. ಈ ಸಹೃದಯರನ್ನು ಕುರಿತು ಕನ್ನಡ ಕವಿಗಳು ತಮ್ಮ ಕೃತಿಗಳನ್ನು ಮೆಚ್ಚುವ, ಮೆಚ್ಚದಿರುವ ಸಂದರ್ಭದಲ್ಲಿ ಅವರ ಸ್ವರೂಪ ಕುರಿತಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸಹೃದಯರನ್ನು ಕುಜನ, ಸುಜನವೆಂದು ವಿಭಾಗಿಸುತ್ತಾರೆ. ಸುಜನರು ದುಂಬಿಯಾದರೆ, ಕುಜನರು ಗೂಗೆ ಎಂದು ವರ್ಣಿಸಿದ್ದು ಕಂಡುಬರುತ್ತದೆ.

''ಸಾರಣೆಯಂತಿರೆ ಕಸಮನೆ ಪಿಡಿವರ್ ಕೆಲಬರ್ ಮಹಾಪುರುಷರ್ಕಳ್''

(ಜರಡಿಯ ಹಾಗೆ ಕಸವನ್ನು ಹಿಡಿಯುವವರು)

-ರನ್ನ. ಅಜಿತ ಪುರಾಣ

----------

''ಎಡೆವಾಯ್ದು ಬಂದಿ ತಪ್ಪನ್ನೇ ಹಿಡಿದು, ಕಾವ್ಯದಲ್ಲಿ ಕಡೆತನಕ ಬಂದ ಲೇಸನ್ನು ಕಾಣದವರು''

-ರಾಘವಾಂಕ. ಹರಿಶ್ಚಂದ್ರ ಕಾವ್ಯ

-------------

(ಜಿ.ಎಸ್.ಶಿವರುದ್ರಪ್ಪ. ೧೯೮೯: ಪು. ಸಂ. ೭೯)

ಈ ರೀತಿಯಾಗಿ ಕುಜನರನ್ನು ಕುರಿತು ಕವಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕಾವ್ಯದ ಪ್ರಯೋಜನ ಕುರಿತಂತೆ ಕನ್ನಡ ಕವಿಗಳು ಸಂಸ್ಕೃತ ಮೀಮಾಂಸಕರೊಂದಿಗೆ ಸಹಮತದಿಂದಿದ್ದಾರೆ. ಆನಂದ ಅಥವಾ ಸಂತೋಷವೇ ಕಾವ್ಯದ ಪ್ರಮುಖ ಪ್ರಯೋಜನ ಎಂದು ಗುರುತಿಸುತ್ತಾರೆ.

ಮಾರ್ಗ ಕಾವ್ಯಗಳಲ್ಲಿ ಕಾವ್ಯ ಕುರಿತ ಚರ್ಚೆ, ಕಾವ್ಯದ ಸಮರ್ಥನೆ, ಕುಕವಿ, ಅಕಾವ್ಯದ ನಿಂದನೆಗಳನ್ನು ಕಾಣಬಹುದು. ಮಾರ್ಗದಲ್ಲಿ ಕವಿ ತನ್ನ ಕೃತಿಯ ವಸ್ತು-ರೀತಿ-ಉದ್ದೇಶಗಳನ್ನು ತಿಳಿಸುತ್ತ ಅದರ ಗುಣ-ದೋಷಗಳಿಗೆ ತಾನೇ ಜವಾಬ್ದಾರ ಎಂಬ ಪ್ರಜ್ಞೆ ಉಳ್ಳವನಾಗಿರುತ್ತಾನೆ. ಹಾಗು ತನ್ನ ಮತ್ತು ಇತರ ಕಾವ್ಯ ಕುರಿತಂತೆ, ಕಾವ್ಯ ಸ್ವರೂಪ ಕುರಿತಂತೆಯೂ ಚಿಂತಿಸುತ್ತಾನೆ. ಇಲ್ಲಿ ಕವಿ ಜವಾಬ್ದಾರಿಯುತ ವ್ಯಕ್ತಿಯಾಗಿ ಕಂಡು ಬರುತ್ತಾನೆ.

ದೇಸಿ ಕಾವ್ಯಗಳು ಅಧ್ಯಾತ್ಮ ಕುರಿತ ಚರ್ಚೆಯನ್ನು ಹೆಚ್ಚು ಒಳಗೊಂಡಿರುತ್ತವೆ. ಇಲ್ಲಿ ಕವಿ ದೈವಿಶಕ್ತಿಗೆ ತನ್ನನ್ನು ಅರ್ಪಿಸಿಕೊಂಡಿರುತ್ತಾನೆ. ಹಾಗಾಗಿ ಇಲ್ಲಿ ಕವಿ ಹೆಚ್ಚು ಸ್ವತಂತ್ರ ಎಂದೆನಿಸುವುದಿಲ್ಲ. ಹಾಗು ಪ್ರತ್ಯೇಕವಾಗಿ ಹೇಳಿಕೊಳ್ಳಬಹುದಾದ ಕಾವ್ಯ ಪರವಾದ ವಿಚಾರಗಳು ಕಂಡು ಬರುವುದಿಲ್ಲ.

ಕೆಟ್ಟ ಕಾವ್ಯ ಕುರಿತ ಕನ್ನಡ ಕವಿಗಳ ಪ್ರತಿಕ್ರಿಯೆಗಳು ಪರೋಕ್ಷವಾಗಿ ಒಳ್ಳೆಯ ಕಾವ್ಯ ಹೇಗಿರಬೇಕು ಎಂಬಂಥ ವಿಚಾರವನ್ನೇ ವ್ಯಕ್ತ ಪಡಿಸುತ್ತವೆ.

''ಲಲಿತ ಪದಂ ಪ್ರಸನ್ನ ಕವಿತಾಗುಣವಿಲ್ಲದ'' ಕಾವ್ಯ ಕಾವ್ಯವೇ ಅಲ್ಲ ಎಂದು ಪಂಪ ಹೇಳಿದ ಮಾತು ಕಾವ್ಯ ಕಲ್ಪನೆ ಕುರಿತಂತೆಯೇ ಇದೆ.

''ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗ,
ಅಯ್ಯ ಮಂಚಿದೆ ಎನೆ ತೆಲುಗ,
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು
ಮೈಯುಬ್ಬಿ ಕೇಳರಣ್ಣಾ''

ಎಂಬ ರತ್ನಾಕರ ವರ್ಣಿಯ ಮಾತು ಕಾವ್ಯ ಕುರಿತಂತೆಯೂ ಹಾಗೂ ಕಾವ್ಯ ಸಂವಹನ ಕುರಿತಂತೆಯೂ ಹೇಳುತ್ತದೆ.

ಕವಿಗಳ ವಿಂದನೆಯ ಮಾತುಗಳು ಕವಿ ಕುರಿತ ಸ್ವರೂಪದ ಬಗ್ಗೆಯೇ ತಿಳಿಸುತ್ತವೆ.

''ಸರಸತಿಯನೆ ಅಬಲೆಯನೆ ಗೋಣ್ಮುರಿಗೊಂಡು ಅರ್ಥಕ್ಕೆ ಕುದಿದು
ಮೋಯಿಸುವ ಸರಸ್ವತಿ ದ್ರೋಹರು''   - ರನ್ನ

''ಗುಡಾರದ ಕವಿಯಂತೆ ಮುಟ್ಟ ಪೋದ ಕವಿಗಳು''

- ರನ್ನ

''ನವರಸಮಂ ಕೆರೆಯ ನುಡಿದನೆ ಎನಿಪಿದ ಕವಿ ಸತ್ಕವಿಯೆನಿಕ್ಕುಂ''

- ರನ್ನ

''ಪರರ ಕಾವ್ಯಾರ್ಥಗಳನ್ನು ಧರಿಸುವ ಅಕ್ಷರ ದರಿದ್ರರು''

- ಹರಿಹರ (ಜ.ಎಸ್.ಎಸ್. ೧೯೮೯; ಪು. ಸಂ. ೮೭)

ಮೇಲಿನ ಸಾಲುಗಳು ಕವಿಯಾದವನ ಅಭಿವ್ಯಕ್ತಿ ಸಾಮರ್ಥ್ಯ, ಸ್ವಾತಂತ್ರ್ಯಗಳನ್ನು ಕುರಿತು ಚಿಂತಿಸುವುದನ್ನು ಕಾಣಬಹುದು.

ಕಾವ್ಯ ವಿಮರ್ಶೆಯ ಮುಖ್ಯ ಪ್ರಶ್ನೆಗಳಾದ ಕವಿ ಎಂದರೇನು ? ಕೃತಿ ಎಂದರೇನು ? ಓದುಗನೆಂದರೆ ಯಾರು ? ಎಂಬ ಪ್ರಶ್ನೆಗಳಿಗೆ ಸಿಕ್ಕುವ ಉತ್ತರಗಳು, ಅಭಿಪ್ರಾಯಗಳೇ ಕನ್ನಡ ಕಾವ್ಯ ವಿಮರ್ಶೆಯ ಸ್ವರೂಪವನ್ನು ನಿರ್ಧರಿಸುತ್ತದೆ.

ಇದುವರೆಗಿನ ಚರ್ಚೆಯನ್ನು ಹೀಗೆ ಸಂಗ್ರಹಿಸಬಹುದು:

---

೧. ಕಾವ್ಯಾಂತರ್ಗತ ಕಾವ್ಯ ಚರ್ಚೆ ಕನ್ನಡ ಕಾವ್ಯ ಪರಂಪರೆಯಲ್ಲಿ ಬೆಳೆದು ಬಂದಿತು. ಕಾವ್ಯದ ಭಾಗವಾಗಿಯೇ ಕವಿ-ಕಾವ್ಯ ಚರ್ಚೆ, ಸತ್ಕವಿ ಪ್ರಶಂಸೆ, ಕುಕವಿ ನಿಂದನೆಗಳನ್ನು ಕಾಣಬಹುದು.

೨. ಕನ್ನಡ ಕಾವ್ಯಗಳಲ್ಲಿ ಕಂಡು ಬರುವ ಪೂರ್ವಕವಿಗಳ ಸ್ಮರಣೆ ಹಾಗು ಸ್ವಕಾವ್ಯದ ಪ್ರಶಂಸೆಗಳು ಕವಿಗಿರಬೇಕಾದ ಗುಣಗಳನ್ನು, ಕವಿಯ ಕುರಿತು ಅಭಿಪ್ರಾಯಗಳನ್ನು, ಕಾವ್ಯ ಲಕ್ಷಣಗಳನ್ನು ತಿಳಿಸುತ್ತವೆ. ಸ್ವಕಾವ್ಯ ಪ್ರಶಂಸೆಯು ಕೃತಿಯ ಅನನ್ಯತೆಯನ್ನು, ಕವಿಯ ವ್ಯಕ್ತಿ ವಿಶಿಷ್ಟಾಭಿವ್ಯಕ್ತಿಯನ್ನು ಸಾಧಿಸುವ ಅಪೇಕ್ಷೆಯನ್ನು ತಿಳಿಸುತ್ತದೆ.

೩. ಕಾವ್ಯ ಎಲ್ಲ ಕವಿಗಳಿಗೂ ಸಮಾನವಾದ ಭಾಷಾ ಸಾಮಗ್ರಿಯಿಂದಲೇ ಮೂಡಿದರೂ ಕವಿಯ ವಿಚಕ್ಷಣತೆ -ಪ್ರತಿಭೆಯಿಂದಾಗಿ ಅನನ್ಯವಾಗುತ್ತದೆ ಎಂಬ ವಿಚಾರವನ್ನು ಸರಸ್ವತಿ ಕುರಿತ ವರ್ಣನೆಗಳಲ್ಲಿ ಕಾಣಬಹುದು. ಕಾವ್ಯಶಕ್ತಿ, ಪ್ರತಿಭೆ ಕುರಿತ ವಿಚಾರಗಳನ್ನು ಗಮನಿಸಬಹುದು.

೪. ಕಾವ್ಯ ಎಂಬುದು ವಾಸ್ತವವಾಗಿ ನಾಟಕ ಅಥವಾ ದೃಶ್ಯಕಾವ್ಯ ಎಂಬುದೊಂದು ಅಭಿಪ್ರಾಯವೂ ಇದೆ. ಮೊದಲ ಬಾರಿಗೆ ಜನಾಂತರ ದೃಷ್ಟಿ ಎಂಬ ಪದ ಬಳಕೆಗೆ ಬಂದಿದ್ದು, ಕವಿಯ ದೃಷ್ಟಿಗೆ ಆದ್ಯತೆ ನೀಡಲಾಗಿದೆ.

೫. ಕಾವ್ಯ ಸತ್ಯ ಎಂಬ ವಿಚಾರದ ಹಿನ್ನಲೆಯಲ್ಲಿ ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯ ಕುರಿತು ಹಾಗು ಓದುಗನ ದೃಷ್ಟಿಕೋನಗಳನ್ನು ಕುರಿತೂ ಪರಿಚಯಿಸುತ್ತಾರೆ.

೬. ವಸ್ತುಕ-ವರ್ಣಕಗಳೆಂಬ ಕಾವ್ಯ ಪ್ರಭೇದಗಳು ಕನ್ನಡಿಗರ ಕೊಡುಗೆಯಾಗಿದ್ದು ಕನ್ನಡ ಕಾವ್ಯ ಪರಂಪರೆಯಲ್ಲಿ ಬೆಳೆದು ಬಂದಿರುವ ಎರಡು ರೀತಿಯ ಕಾವ್ಯ ಪರಂಪರೆಯನ್ನೆ ತಿಳಿಸುತ್ತವೆ. ಇವುಗಳ ಲಕ್ಷಣ ಕಾಲಕಾಲಕ್ಕೆ ಬೇರೆಯಾಗುತ್ತ ಸಾಗಿದರೂ ಅವುಗಳ ವೈಶಿಷ್ಟ್ಯವನ್ನು ಅರಿಯಬಹುದು.

೭. ಕಾವ್ಯದ ವಸ್ತುವು ಕೂಡಾ ಕವಿಯ ಸ್ವರೂಪವನ್ನು ನಿರ್ಧರಿಸುತ್ತದೆ. ಕಾವ್ಯವಸ್ತುವಿನಲ್ಲಿ ಉಂಟಾದ ಬದಲಾವಣೆ, ಅವುಗಳ ನಿರ್ವಹಣೆಯಲ್ಲಿ ತೋರಿದ ಸ್ವಾತಂತ್ರ್ಯ ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೇ ಸೂಚಿಸುತ್ತದೆ. ಕವಿ ಕೇಂದ್ರಿತ ನಿಲುವಿಗೆ ಪೂರಕವಾಗಿದೆ.

೮. ಕನ್ನಡದ ಪರಂಪರೆಯಲ್ಲಿ ಮೂಡಿದ ಶೈಲಿಯ ಚರ್ಚೆ ಕಾವ್ಯ ಸ್ವರೂಪವನ್ನು ನಿರ್ಧರಿಸುತ್ತ ಕನ್ನಡ ಕಾವ್ಯ ಪರಂಪರೆಯಲ್ಲಿ ಹಾದು ಬಂದಿರುವ ಎರಡು ರೀತಿಯ ಕಾವ್ಯಧಾರೆಗಳ ಲಕ್ಷಣಗಳನ್ನು ತಿಳಿಸುತ್ತದೆ.

೯. ಕಾವ್ಯಾನುಭವ-ಕಾವ್ಯ ಪ್ರಯೋಜನ ಕುರಿತು ಹೇಳುವಾಗ ಸಹೃದಯ ಅಥವಾ ಓದುಗರ ಸ್ವರೂಪ ಕುರಿತು ಚರ್ಚಿಸಲಾಗುತ್ತದೆ. ನಿರೀಕ್ಷಿತ ಸಹೃದಯ ಸಮೂಹ ಕಾವ್ಯ ಪ್ರಕಾರವನ್ನೇ ನಿರ್ಧರಿಸುವಂಥದ್ದು . ಕಾಣಬಹುದು. ಹಾಗೇ, ದೇಸಿ ಪರಿಕಲ್ಪನೆಗಳು ಈ ಸಹೃದಯ ವೃಂದದ ಮೆಚ್ಚುಗೆ ಒಡನಾಟಗಳಿಂದಲೇ ಬೆಳೆದುದನ್ನು ಗಮನಿಸಬೇಕು. ಕನ್ನಡ ಸಾಹಿತ್ಯದ ರೂಪ, ರೀತಿ, ಧೋರಣೆಗಳನ್ನು ಸಹ ಈ ಸಹೃದಯ ವರ್ಗಗಳು ನಿರ್ಧರಿಸುವುದನ್ನು ನೋಡಬಹುದು.

೧೦. ಕಾವ್ಯ ಪ್ರಯೋಜನ ಕುರಿತಂತ ವಿಚಾರಗಳು, ಕುಕವಿ, ಸತ್ಕವಿ, ಅಕಾವ್ಯ ಕುರಿತಂತ ವಿಚಾರಗಳೆಲ್ಲ ಕನ್ನಡ ಕಾವ್ಯ ಕಲ್ಪನೆಗಳಿಗೆ ಒಂದು ಚೌಕಟ್ಟನ್ನು ಹಾಕಿಕೊಡುತ್ತವೆ.

---

**ಉಲ್ಲೇಖ**


೧. ಜಿ.ಎಸ್. ಶಿವರುದ್ರಪ್ಪ: ಕನ್ನಡ ಕವಿಗಳ ಕಾವ್ಯ ಕಲ್ಪನೆ

## ಅಧ್ಯಾಯ-೪

## ವಚನಗಳಲ್ಲಿ ಕಾವ್ಯ ಮೀಮಾಂಸೆಯ ತತ್ತ್ವಗಳು:

೧೨ ನೇ ಶತಮಾನದಲ್ಲಿ ನಾವು ಸಾಮಾಜಿಕ ಮತ್ತು ಸಾಹಿತ್ಯಕ ಸ್ಥಿತ್ಯಂತರಗಳನ್ನು ಖಚಿತವಾಗಿ ಗುರುತಿಸಬಹುದು. ಕನ್ನಡದ ಬದುಕಿನಲ್ಲಿ ಆಧುನಿಕತೆಯ ಉಗಮವನ್ನು ಈ ಶತಮಾನದ ರಚನೆಗಳ ಮುಖಾಂತರ ಕಂಡುಕೊಳ್ಳಬಹುದು. ಈ ಆಧುನಿಕ ಮನೋಧರ್ಮವನ್ನು ಮುಖ್ಯವಾಗಿ ಭಾಷೆ ಮತ್ತು ವ್ಯಕ್ತಿತ್ವಗಳನ್ನು ಕುರಿತ ಬದಲಾದ ಧೋರಣೆಗಳಲ್ಲಿ ಗುರುತಿಸಬಹುದು. ಹಳಗನ್ನಡದ ಕೃತಿಗಳಲ್ಲಿ 'ವ್ಯಕ್ತಿತ್ವ'ಕ್ಕಿಂತ ಮನುಷ್ಯ ಸ್ವಭಾವದ ಅನಾವರಣ ಮುಖ್ಯವಾಗಿರುವುದು ಕಂಡು ಬರುತ್ತದೆ. ಪಂಪ, ರನ್ನ ಮುಂತಾದ ಕವಿಗಳು ಚಿತ್ರಿಸಿರುವ ಪಾತ್ರಗಳು ಮನುಷ್ಯ ಸ್ವಭಾವದ ಬೇರೆ ಬೇರೆ ಮುಖಗಳ ಅಥವಾ ಬದುಕಿನ ಬೇರೆ ಬೇರೆ ಮೌಲ್ಯಗಳ ಮೂರ್ತಿಗಳಂತೆ ಕಂಡು ಬರುತ್ತಾರೆ. 'ಛಲದೊಳ್ ದುರ್ಯೋಧನಂ' ಎಂದು ಆರಂಭವಾಗುವ ಪಂಪನ ಪದ್ಯ ಇಂಥ ಧೋರಣೆಯನ್ನು ವ್ಯಕ್ತಪಡಿಸುತ್ತದೆ. ಆದರೆ ೧೨ ನೆಯ ಶತಮಾನದಲ್ಲಿ ಮೊದಲ ಬಾರಿಗೆ ಮನುಷ್ಯ ಸಾಮಾನ್ಯ ಅನುಭವಗಳಿಗಿಂತ ವ್ಯಕ್ತಿಯೊಬ್ಬನ ಅನುಭವದ ಪ್ರಾಮಾಣ್ಯಕ್ಕೆ ಪ್ರಾಮುಖ್ಯ ಸಿಗತೊಡಗಿತು. ಹೀಗಾಗುವುದಕ್ಕೆ ಆ ಶತಮಾನದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು ಕಾರಣವಾಗಿರಬಹುದು. ಸಣ್ಣ ಸಣ್ಣ ಪಾಳೇ ಪಟ್ಟುಗಳ ಉಗಮ, ಕುಶಲ ಕರ್ಮಿಗಳಿಗೆ ಸಿಕ್ಕ ಪ್ರಾಧಾನ್ಯ ಮತ್ತು ಭಕ್ತಿಗೆ ದೊರೆಯತೊಡಗಿದ ಮನ್ನಣೆ ಇವುಗಳಿಂದಾಗಿ ವ್ಯಕ್ತಿಯೊಬ್ಬನ ಅನನ್ಯತೆ, ಅನುಭವದ ವೈಶಿಷ್ಟ್ಯಗಳು ಮುಖ್ಯವೆನಿಸತೊಡಗಿದವು. ಹಿಂದಿನ ಎರಡು ಶತಮಾನಗಳಿಗೆ ಹೋಲಿಸಿದರೆ ೧೨ ನೆಯ ಶತಮಾನದಲ್ಲಿ ಸಮಾಜದ ವಿವಿಧ ವರ್ಗಗಳ ಜನರು ಭಕ್ತಿಯ ಮುಖಾಂತರ ಹೊಸ ಬಗೆಯ ಸಮುದಾಯವನ್ನು ಸೃಷ್ಟಿಸಿ ಕೊಂಡರು. ತಮ್ಮ ತಮ್ಮ ಬದುಕಿನ

ಹಿನ್ನಲೆಯಲ್ಲಿ ಅವರು ಅನೇಕ ಹೊಸ ಪ್ರಶ್ನೆಗಳನ್ನು ಮಂಡಿಸಿದ್ದು ಕಾಣಿಸುತ್ತದೆ. ಧರ್ಮದ ವಿಚಾರ ಕೂಡಾ ವೈಯಕ್ತಿಕ ಅನುಭವ ಪ್ರಾಮಾಣ್ಯದ ನೆಲೆಯಿಂದ ಪ್ರಶ್ನೆಗೊಳಪಡುವ, ಮಥನಗೊಳ್ಳುವ ಪರಿಯನ್ನು ಈ ಶತಮಾನದಲ್ಲಿ ಗುರುತಿಸಬಹುದು.

ಈ ಕಾರಣಗಳಿಂದ ಭಾಷೆಯ ಬಗೆಗಿನ ಧೋರಣೆಯೂ ಬದಲಾಯಿತು. ಕಥೆಯನ್ನು ಹೇಳುವ ಮಾಧ್ಯಮವಾಗಿದ್ದ ಭಾಷೆ ಈಗ ವ್ಯಕ್ತಿಯ ಅಂತರಂಗದ ಪರಿಶೀಲನೆಯ ಸಾಧನವಾಗಿ ಬಳಕೆಯಾಗ ತೊಡಗಿತು. ಈ ಮಾತು ಕೇವಲ ಬಿಡಿ ಬಿಡಿಯಾದ ವಚನಗಳಿಗೆ ಮಾತ್ರವಲ್ಲದೆ ೧೨ ನೆಯ ಶತಮಾನದ ನಂತರ ರಚಿತವಾದ ಹರಿಹರ, ರಾಘವಾಂಕ ಮುಂತಾದವರ ಮಹಾಕಾವ್ಯಗಳ ಮಟ್ಟಿಗೂ ನಿಜ. ಹರಿಹರನು ಗಿರಿಜಾಕಲ್ಯಾಣದಲ್ಲಿ ಅಸಂಖ್ಯಾತ ವರ್ಣನೆಗಳ ಮುಖಾಂತರ ಈ ಬದಲಾದ ದೃಷ್ಟಿಯನ್ನು ವ್ಯಕ್ತಪಡಿಸಿದ್ದಾನೆ. ಗಿರಿಜಾಕಲ್ಯಾಣದ ೨ನೆಯ ಆಶ್ವಾಸದಲ್ಲಿ ಬರುವ ಮುಗ್ಧೆಯರು, ಮಧ್ಯಮ ನಾಯಕಿಯರು, ವಿದಗ್ಧವನಿತೆಯರ ವರ್ಣನೆಯಲ್ಲಿ ಹರಿಹರನು ಈ ಸ್ತ್ರೀಯರ ಖಾಸಗಿ ಬದುಕು ಮತ್ತು ಸಾರ್ವಜನಿಕವಾಗಿ ಅವರು ಕಾಣಿಸಿಕೊಂಡಾಗ ಅವರ ವರ್ತನೆಯಲ್ಲಿ ಆಗುವ ಬದಲಾವಣೆಗಳನ್ನು ವಿವರವಾಗಿ ಚಿತ್ರಿಸಿರುವುದನ್ನು ನೋಡಿದರೆ ಮೇಲಿನ ಮಾತಿಗೆ ವಿವರಣೆ ಸಿಗುತ್ತದೆ.

ವ್ಯಕ್ತಿತ್ವದ ಹೊಸ ಕಲ್ಪನೆ, ಭಾಷೆಯ ಬಗ್ಗೆ ಬದಲಾದ ಧೋರಣೆ ಮತ್ತು ಹೊಸದಾಗಿ ಹುಟ್ಟಿದ ವೈಚಾರಿಕತೆಯ ಪರಿಣಾಮವಾಗಿ ೧೨ ನೇ ಶತಮಾನದ ಕಾವ್ಯ ಚಿಂತನೆಯಲ್ಲೂ ಮಹತ್ವದ ಬದಲಾವಣೆ ಸಂಭವಿಸಿದ್ದನ್ನು ಗುರುತಿಸಲು ಸಾಧ್ಯವಿದೆ. ಈ ಪಲ್ಲಟಗಳನ್ನು ಕವಿ, ಕೃತಿ, ಓದುಗ ಸಂಬಂಧ, ಭಾಷೆಯ ಬಗ್ಗೆ ನಡೆಸಿದ ಚಿಂತನೆ, ಅರ್ಥ ಸ್ವರೂಪದ ಬಗ್ಗೆ ನಡೆಸಿದ ಚರ್ಚೆ, ವಚನ ರಚನೆಯ ಹಿಂದಿನ ಬದಲಾದ ಉದ್ದೇಶ ಮುಂತಾದ ದೃಷ್ಟಿಗಳಿಂದ ಪರಿಶೀಲಿಸಿ ನೋಡಲು ಸಾಧ್ಯವಿದೆ.

### ತಾತ್ವಿಕ ನಿಲುವುಗಳು :

ಮನುಷ್ಯನ ಎಲ್ಲ ಚಿಂತನೆಗಳ ಹಿನ್ನಲೆಯಲ್ಲಿ ನಿರ್ದಿಷ್ಟವಾದ ತಾತ್ವಿಕ ನಿಲುವುಗಳನ್ನು ಗುರುತಿಸಬಹುದು. ಸರಳಗೊಳಿಸಿ ಹೇಳುವುದಾದರೆ ತಾತ್ವಿಕ ನಿಲುವು ಎಂಬುದು ಲೋಕದೃಷ್ಟಿಯೇ

ಆಗಿರುತ್ತದೆ. ಈ ಲೋಕದೃಷ್ಟಿಗೆ ಅನುಗುಣವಾಗಿ ಚಿಂತನೆಗಳ ವೈವಿಧ್ಯಗಳು ಉಂಟಾಗುತ್ತವೆ. ಆದರೆ ವೈವಿಧ್ಯಮಯ ಚಿಂತನೆಗಳ ಬೆನ್ನೆಲುಬಾಗಿರುವ ತಾತ್ವಿಕ ನಿಲುವುಗಳು ಮಾತ್ರ ಪರಿಮಿತವಾಗಿರುತ್ತವೆ.

ಲೋಕ ದೃಷ್ಟಿಯನ್ನು ಕುರಿತ ಪ್ರಮುಖ ನಿಲುವುಗಳನ್ನು ಹೀಗೆ ಗುರುತಿಸಲಾಗಿದೆ. '' ವ್ಯಕ್ತಿಗೆ ಮಾತ್ರ ಸತ್ಯತ್ವವುಂಟೆಂದೂ, ವಸ್ತುವಿಗೆ ಸತ್ಯತ್ವವಿಲ್ಲವೆಂದೂ ಒಂದು ನಿಲುವು. ವಸ್ತುವಿಗೆ ಸತ್ಯತ್ವವುಂಟು ವ್ಯಕ್ತಿ ಇಲ್ಲದೆಯೂ ವಸ್ತು ಇರಬಲ್ಲದು ಎಂಬುದು ಎರಡನೆಯ ನಿಲುವು. ವ್ಯಕ್ತಿ ಮತ್ತು ವಸ್ತುಗಳೆರಡಕ್ಕೂ ಸತ್ಯತ್ವವುಂಟೆಂಬುದು ಮೂರನೆಯ ನಿಲುವು. ವ್ಯಕ್ತಿ ಮತ್ತು ವಸ್ತು ಸಂಬಂಧವನ್ನು ಕುರಿತೂ ಅಷ್ಟೆ. ವ್ಯಕ್ತಿ - ವಸ್ತು ಎರಡೂ ಭಿನ್ನ, ಭಿನ್ನವಲ್ಲ ಮತ್ತು ಭಿನ್ನವೆಂಬಂತೆ ಕಂಡರೂ ಐಕ್ಯವನ್ನು ಸಾಧಿಸಬಹುದು ಎಂಬ ನಿಲುವುಗಳಿವೆ. ಸಾಮಾನ್ಯ ಮನುಷ್ಯನ ಮನಸ್ಸು ಇವುಗಳಲ್ಲಿ ಯಾವುದಾದರೊಂದು ನಿಲುವಿನ ಶಾಶ್ವತವಾಗಿ ವಿರಮಿಸುವುದು ಕಷ್ಟವೆಂದು ತೋರುತ್ತದೆ. ಈ ಸೀಮಿತ ಸಂಖ್ಯೆಯ ನಿಲುವುಗಳ ಮಿಶ್ರಣ ಚಿಂತನೆಗಳ ವೈವಿಧ್ಯಮಯ ರೂಪಗಳಿಗೆ ಕಾರಣವಾಗಿದೆ.''
(ಓ. ಎಲ್. ನಾಗಭೂಷಣ ಸ್ವಾಮಿ, ೧೯೯೪).

ಕಾವ್ಯ ಮೀಮಾಂಸೆಯನ್ನು ಕುರಿತು ವಿವೇಚಿಸುವಾಗ ಆಯಾ ಕಾವ್ಯಮೀಮಾಂಸೆ ಪಡೆದ ರೂಪಕ್ಕೆ ಕಾರಣವಾಗಿರುವ ತಾತ್ವಿಕ ನಿಲುವನ್ನು ಗುರುತಿಸುವುದು ಅಗತ್ಯವಾಗುತ್ತದೆ. ಮುಖ್ಯವಾಗಿ ಎರಡು ಬಗೆಯ ಕಾವ್ಯಮೀಮಾಂಸೆಗಳನ್ನು ಗುರುತಿಸಬಹುದು. ವ್ಯಕ್ತಿ ಮತ್ತು ವಸ್ತುಗಳು ಭಿನ್ನವೆಂದು ತಿಳಿಯುವ ನಿಲುವಿನ ಕಾವ್ಯ ಮೀಮಾಂಸೆಯು ಕಾವ್ಯವನ್ನು ಒಂದು ವಸ್ತುವೆಂದು ಪರಿಗಣಿಸುತ್ತದೆ. ಕವಿ, ಕೃತಿ, ಓದುಗ ಇವೆಲ್ಲವು ಪ್ರತ್ಯೇಕ ಅಸ್ತಿತ್ವವುಳ್ಳ ಘಟಕಗಳು ಮತ್ತು ಈ ಒಂದೊಂದು ಘಟಕವನ್ನೂ ವಸ್ತುನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸಬಹುದೆಂದು ಈ ದೃಷ್ಟಿಯ ತಿಳಿವಳಿಕೆ. ಇದಕ್ಕೆ ಪ್ರತಿಯಾಗಿ ವ್ಯಕ್ತಿ ಮತ್ತು ವಸ್ತುಗಳ ನಡುವೆ ಐಕ್ಯವನ್ನು ಸಾಧಿಸಬಹುದು ಎಂಬ ನಿಲುವು ಕಾವ್ಯವನ್ನು ಒಂದು ಪ್ರಕ್ರಿಯೆಯಾಗಿ ಕಾಣುತ್ತದೆ. ಹೀಗೆ ನೋಡಿದಾಗ ಕವಿ, ಕೃತಿ, ಓದುಗ ಇವೆಲ್ಲ ಭಿನ್ನವೆಂಬಂತೆ ತೋರಿದರೂ ಒಂದೇ ಪ್ರಕ್ರಿಯೆಯ ಅಂಶಗಳು ಎಂಬಂತೆ ಕಾಣತೊಡಗುತ್ತವೆ.

ಕಾವ್ಯವನ್ನು ಅನುಕರಣೆ, ಲೋಕದ ಪ್ರತಿಬಿಂಬ ಎಂದೆಲ್ಲ ವರ್ಣಿಸುವುದನ್ನು ಮೊದಲನೆ ಬಗೆಯ ಕಾವ್ಯಮೀಮಾಂಸೆಯಲ್ಲಿ ಕಂಡರೆ, ಎರಡನೇ ಬಗೆಯ ಕಾವ್ಯ ಮೀಮಾಂಸೆಯಲ್ಲಿ ಇದೇ ಕಾವ್ಯ ಪ್ರಕ್ರಿಯೆಯನ್ನು ಸ್ವಯಂ ತೇಜಸ್ಸುಳ್ಳ ಒಂದು ಸೃಷ್ಟಿ ಎಂದು ಪರಿಗಣಿಸಿರುವುದು ಕಾಣುತ್ತದೆ. ಎಂ. ಎಚ್. ಅಬ್ರಾಂಸ್ ಎಂಬ ಚಿಂತಕ ಕಾವ್ಯಮೀಮಾಂಸೆಯ ಈ ಭಿನ್ನತೆಯನ್ನು ಕನ್ನಡಿ ಮತ್ತು ದೀಪ ಎಂಬ ರೂಪಕಗಳ ಮುಖಾಂತರ ವಿವರಿಸುತ್ತಾನೆ.

ವಚನಗಳಲ್ಲಿ ಮೊದಲ ಬಾರಿಗೆ ವ್ಯಕ್ತಿಯ ಅಂತರಂಗದ ಬದುಕಿಗೆ ಪ್ರಾಮುಖ್ಯ ಸಿಗತೊಡಗಿದಾಗ ವಾಗ್ರಚನೆಗಳನ್ನು ಕುರಿತ ದೃಷ್ಟಿಯೂ ಬದಲಾಗಿದ್ದು ಕಂಡುಬರುತ್ತದೆ. ವಚನ, ಮಾತು, ಭಾಷಿಕ ರಚನೆ ಇವೆಲ್ಲವುಗಳನ್ನು ಕುರಿತ ಚಿಂತನೆಯ ಹಿಂದೆ ವಚನಕಾರರು ಒಪ್ಪಿದ್ದ ತಾತ್ವಿಕ ಧೋರಣೆಯ ಪ್ರಭಾವವನ್ನು ಗುರುತಿಸಬಹುದು. ವ್ಯಕ್ತಿ ಮತ್ತು ವಸ್ತುಗಳ ಐಕ್ಯವನ್ನು ಒಪ್ಪುವ ಅದ್ವೈತದ ಒಂದು ಬಗೆಯಾದ ಶಕ್ತಿ ವಿಶಿಷ್ಟಾದ್ವೈತದ ನಿಲುವುಗಳು ಭಾಷಿಕ ರಚನೆಯನ್ನು ಕುರಿತ ಧೋರಣೆಯನ್ನು ರೂಪಿಸಿರುವುದನ್ನು ನೋಡಬಹುದು.

೧. ನಾನು ನಿನಗೊಲಿದೆ , ನೀನು ನನಗೊಲಿದೆ
ನೀನೆನ್ನನಗಲದಿಪ್ಪೆ, ನಾ ನಿನ್ನನಗಲದಿಪ್ಪೆನಯ್ಯ
ನಿನಗೆ ನನಗೆ ಬೇರೊಂದು ಠಾವುಂಟೆ ?
. . . . . . . . . . . . . . . . . . . .
. . . . . . . . . ಚೆನ್ನಮಲ್ಲಿಕಾರ್ಜುನ. (೮೨)

೨. ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೆ ?
ಸೂರ್ಯಕಾಂತದಗ್ನಿಯನಾರು ಭೇದಿಸಬಲ್ಲರು ?
ಅಪಾರಮಹಿಮ ಚೆನ್ನಮಲ್ಲಿಕಾರ್ಜುನನೆನ್ನೊಳಡಗಿಪ್ಪ ಪರಿಯ
ಬೇರಿಲ್ಲದೆ ಕಂಡು ಕಣ್ದೆರೆದೆನು. (೫೩)

೩. ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ
ನಿನ್ನರಿಯದ ಮುಕ್ತಿಯೇ ನರಕ ಕಂಡಯ್ಯ

ನೀನೊಲ್ಲದ ಸುಖವೇ ದುಃಖ ಕಂಡಯ್ಯ

ನೀನೊಲಿದ ದುಃಖವೇ ಪರಮ ಸುಖ ಕಂಡಯ್ಯ

ಚೆನ್ನಮಲ್ಲಿಕಾರ್ಜುನಯ್ಯ

ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪೆನು (೫೨)

೪. ಅಂಗ ಲಿಂಗವ ಭೇದಿಸಿ

ಅಂಗ ಲಿಂಗದೊಳಗಾಯಿತ್ತು

ಮನ ಲಿಂಗವ ಭೇದಿಸಿ

ಮನ ಲಿಂಗದೊಳಗಾಯಿತ್ತು

ಭಾವ ಲಿಂಗವ ಭೇದಿಸಿ

ಭಾವ ಲಿಂಗದೊಳಗಾಯಿತ್ತು

ಚೆನ್ನಮಲ್ಲಿಕಾರ್ಜುನ, ನಿಮ್ಮ ಒಲುಮೆಯ ಸಂಗದಲ್ಲಿರ್ದು

ಸ್ವಯಂ ಲಿಂಗಿಯಾದೆನು. (೫೦)

೫. ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ

ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ

ನೀನು ಜಗಕ್ಕೆ ಬಲ್ಲಿದನು

ನಾನು ನಿನಗೆ ಬಲ್ಲಿದನು ಕಂಡಯ್ಯ

ಕರಿಯು ಕನ್ನಡಿಯೊಳಗಡಗಿದಂತಯ್ಯ

ಎನ್ನೊಳಗೆ ನೀನಡಗಿದೆ ಕೂಡಲ ಸಂಗಮ ದೇವ. (೯೦೪)

೬. ಅಂತರಂಗ ಬಹಿರಂಗ

ಆತ್ಮಸಂಗ ಒಂದೇ ಅಯ್ಯ

ನಾದ - ಬಿಂದು ಕಳಾತೀತ

ಆದಿಯಾಧಾರ ನೀನೆ ಅಯ್ಯ

ಆರೂಢದ ಕೂಟದ ಸುಖವ

ಕೂಡಲ ಸಂಗಯ್ಯ ತಾನೇ ಬಲ್ಲ. (೯೬೦, ಬಸವಣ್ಣ)

ಅಕ್ಕನ ವಚನಗಳಿಂದ ಉದ್ಧರಿಸಿರುವ ಮೊದಲ ಮೂರು ಭಾಗಗಳು ಕ್ರಮವಾಗಿ ವ್ಯಕ್ತಿ - ವಸ್ತುಗಳ ಐಕ್ಯವನ್ನೇ ಬೇರೆ ಬೇರೆ ನೆಲೆಗಳಿಂದ ವಿವರಿಸುತ್ತದೆ. ಮೊದಲನೆಯ ವಚನವು ವ್ಯಕ್ತಿ ಮತ್ತು ಸಾಮಾನ್ಯವಾಗಿ ''ಪರ'' ವೆಂದು ಭಾವಿಸುವ ವಸ್ತು ಇವೆರಡೂ ಪ್ರತ್ಯೇಕವಲ್ಲ ಒಂದೇ ಎಡೆಯಲ್ಲಿ ಇರುವಂಥವು ಎಂಬ ಧೋರಣೆಯನ್ನು ಪ್ರಶ್ನೆಯ ರೂಪದಲ್ಲಿ ಮಂಡಿಸುತ್ತದೆ. ಈ ಅರಿವು ಅನುಭವವಾಗಿ ತಮ್ಮೊಳಗೆ ಅಡಗಿರುವ ದೈವವನ್ನು ಕಂಡದ್ದರ ವಿವರಣೆ ಎರಡನೆಯ ನಿದರ್ಶನದಲ್ಲಿದೆ. ಮೂರನೆಯ ನಿದರ್ಶನದಲ್ಲಿ ವ್ಯಕ್ತಿ, ವ್ಯಕ್ತಿಯ ಭಾವಗಳು ಮತ್ತು ನಂಬಿದ ದೈವ ಇವು ಮೂರೂ ಒಂದೇ ಪ್ರಕ್ರಿಯೆಯ ಅಂಶಗಳು ಎಂಬುದರ ಸೂಚನೆ ಇದೆ. ನಾಲ್ಕನೆಯ ನಿದರ್ಶನದಲ್ಲಿ ಧಾರ್ಮಿಕ ಪರಿಭಾಷೆ ಬಳಸಿದ್ದರೂ, ಆ ಪರಿಭಾಷೆಗಳು ಸೂಚಿಸಿರುವ ಅರ್ಥದ ವಲಯವನ್ನು ವಿಸ್ತರಿಸಿ ಅನುಭಾವ ಪ್ರಕ್ರಿಯೆಯ ಐಕ್ಯತೆಯನ್ನು ವಿವರಿಸಲಾಗಿದೆ. ಬಸವಣ್ಣನ ವಚನವು ವ್ಯಕ್ತಿಯೊಬ್ಬ ತನ್ನ ವ್ಯಕ್ತಿತ್ವ ಬದ್ಧ ಪ್ರಜ್ಞೆಯ ಮುಖಾಂತರವೇ ಇಡೀ ವಿಶ್ವ ಪ್ರಕ್ರಿಯೆಯ ಅನುಭವವನ್ನು ಒಳಗು ಮಾಡಿಕೊಳ್ಳುವ ಪರಿಯನ್ನು ವಿವರಿಸುತ್ತದೆ.

ಧಾರ್ಮಿಕ ಅಥವಾ ತಾತ್ವಿಕ ಪ್ರತಿಪಾದನೆಗಳೇ ಈ ವಚನಗಳ ಮುಖ್ಯ ಆಶಯವೆಂಬುದು ನಿಜ. ಇಲ್ಲಿ ಗಮನಿಸಬೇಕಾದ ಮಾತೆಂದರೆ ವಚನಕಾರರು ಒಪ್ಪಿಸಿರುವ ಲೋಕದೃಷ್ಟಿಯನ್ನು ಈ ಎಲ್ಲ ಆಯ್ದ ವಚನಗಳು ಅಭಿವ್ಯಕ್ತಿಸುತ್ತವೆ. ಈ ಚಿಂತನೆಯನ್ನು ಕಾವ್ಯ ಮೀಮಾಂಸೆಗೆ ಅಳವಡಿಸಿಕೊಳ್ಳುವುದು ಹೇಗೆ ಎಂಬ ಪ್ರಶ್ನೆ ಮೂಡುತ್ತದೆ.

ಈ ಬಗೆಗೆ ಚಿಂತಿಸುತ್ತ ಜಿ.ಎಸ್. ಶಿವರುದ್ರಪ್ಪನವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಹೀಗಿವೆ: ''ವಚನಕಾರರು ತಾವೇನನ್ನು ಬರೆಯುತ್ತಿದ್ದೇವೆ ಅಂದುಕೊಂಡದ್ದು ಮತ್ತು ಬರೆದದ್ದು ನಿಜವಾಗಿರುವಾಗ ಈ ಬರವಣಿಗೆಯ ಹಿನ್ನೆಲೆಗೆ ಇರಬಹುದಾದ, ಆದರೆ ಅವರು ಬಹುಶಃ ಗಮನಿಸದಿದ್ದ ಕೆಲವು ಸಾಹಿತ್ಯಕ ಧೋರಣೆಗಳನ್ನು ಅವರ ಕಾವ್ಯ ತತ್ತ್ವ ಎಂದು ನೋಡುವುದು ತಪ್ಪೇನಲ್ಲ. ಹೀಗೆ ನೋಡುವಾಗ

ನಾವು ಭಾವಿಸುವ ಅರ್ಥದಲ್ಲೇ, ಅವರ ಕೆಲವು ಮಾತುಗಳನ್ನು ಅವರು ಭಾವಿಸಿದ್ದರೆಂದು ಸಾಧಿಸಲು ಹೋಗುವುದಿಲ್ಲ. ಈ ಪ್ರಯತ್ನದಲ್ಲಿ ವಚನಕಾರರ ಕಾವ್ಯ ತತ್ವದ ಸಮರ್ಥನೆಗೆ ಅವರ ವಚನಗಳಿಂದ ಆಂಶಿಕವಾಗಿ ಅಥವಾ ಇಡೀ ಮಾತುಗಳನ್ನು ಉದಾಹರಿಸುವಲ್ಲಿ, ಅರ್ಥ ಹೆಚ್ಚುವಲ್ಲಿ ಆಯಾ ವಚನಗಳ ಸಂದರ್ಭದಲ್ಲಿ ಅವುಗಳಿಗಿರಬಹುದಾದ ಆಧ್ಯಾತ್ಮಿಕವೋ ಅಥವಾ ಇನ್ನಾವುದನ್ನೋ ಪರಿಗಣನೆಗೆ ತೆಗೆದುಕೊಂಡಿಲ್ಲ, ಹಾಗೆ ಗಣನೆಗೆ ತೆಗೆದುಕೊಳ್ಳುವುದು ವಿಷಯ ಪ್ರತಿಪಾದನೆಗೆ ಹೊರತಾದುದು.''

(ಜಿ.ಎಸ್. ಶಿವರುದ್ರಪ್ಪ:೧೯೭೭:ಪು. ಸಂ. ೬)

:ಸಾಹಿತ್ಯ / ಕಾವ್ಯ ಕುರಿತಂತೆ ವಚನಕಾರರ ಧೋರಣೆ :

ವಚನ ರಚನೆಯ ಬಗ್ಗೆ ವಚನಕಾರರಿಗಿದ್ದ ಉದ್ದೇಶ ಮತ್ತು ಆ ಕಾಲದ ಶ್ರೋತೃ ವೃಂದಕ್ಕೆ ವಚನಗಳ ಮೌಲ್ಯದ ಬಗ್ಗೆ ಇದ್ದ ಧೋರಣೆಗಳಿಗೂ ಇಂದು ನಾವು ವಚನವನ್ನು ಕುರಿತು ತಳೆದಿರುವ ದೃಷ್ಟಿಗೂ ವ್ಯತ್ಯಾಸಗಳಿವೆ. ವಚನಗಳನ್ನು ಸಾಹಿತ್ಯವೆಂದು ಪರಿಭಾವಿಸುವ ದೃಷ್ಟಿಯು ಬೆಳೆಯ ತೊಡಗಿದ್ದು ಈ ಶತಮಾನದ ನಾಲ್ಕನೆಯ ದಶಕದಲ್ಲಷ್ಟೆ. ಹೀಗಿರುವಾಗ ಸಾಹಿತ್ಯ, ಕಾವ್ಯ ಎಂಬ ಪರಿಕಲ್ಪನೆಗಳ ಬಗ್ಗೆ ವಚನಗಳಲ್ಲಿ ವ್ಯಕ್ತವಾಗುವ ಆಲೋಚನೆಗಳನ್ನು ಪರಿಶೀಲಿಸುವುದು ಸೂಕ್ತವಾಗಿದೆ.

ವಚನಕಾರರಲ್ಲಿ ''ಸಾಹಿತ್ಯ'' ಎಂಬ ಕಲ್ಪನೆ ವಾಙ್ಮಯವೆಂಬ ವಿಶೇಷಾರ್ಥದಲ್ಲಿ, ಅಲಂಕಾರಿಕರು ಕವಿಗಳು, ಸಹೃದಯರು ತಿಳಿದುಕೊಂಡ ಅರ್ಥದಲ್ಲಿ ಬಳಕೆಯಾಗಿಲ್ಲ. ಸಾಹಿತ್ಯ ಎಂದರೆ ಹೊಂದಾಣಿಕೆ ಸಂಯೋಗ, ಒಂದು ಮತ್ತೊಂದಕ್ಕೆ ಇರಬೇಕಾದ ಸಂಬಂಧ ಎಂಬ ವಾಚ್ಯಾರ್ಥದಲ್ಲಿಯೇ ಬಳಕೆಯಾಗಿದೆ. ''ಅನೇಕ ಅನುಭಾವಿಗಳಿಗೆ, ನೀತಿಕಾರರಿಗಿದ್ದಂತೆ ಕಾವ್ಯ ಕೂಡಾ ಒಂದು ಕಾಮ ಮೌಲ್ಯವೆಂಬ ಭಾವನೆ ವಚನಕಾರರಿಗಿದ್ದಂತೆ ತೋರುತ್ತದೆ''. (ಜಿ.ಎಸ್. ಶಿವರುದ್ರಪ್ಪ: ೧೯೭೭: ಪು.ಸಂ. ೩)

೬. 'ಲಿಂಗ ಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯ'

- ಬಸವಣ್ಣ (೨೦೯)

೭. 'ಅಂಗದ ಮೇಲೆ ಲಿಂಗ ಸಾಹಿತ್ಯವಾದರೇನು ?' -ಚೆನ್ನಬಸವಣ್ಣ (೯೭೭)

೮. ‘ ಕಾಯದ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವಿಲ್ಲದಿದ್ದರೆ

ನಿರವಯವಾದ ಜ್ಞಾನಯೋಗದ ಕೂಟ ಸಾಧ್ಯವಾಗದು’.

- ಅಲ್ಲಮ (೪೪೩)

ಇಲ್ಲೆಲ್ಲ ಸಾಹಿತ್ಯ ವೆಂದರೆ ಸಂಯೋಗ, ಸಂಘಟನೆ ಎಂದೇ ಅರ್ಥವಿದ್ದು, ಲಿಟರೇಚರ್ ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗಿಲ್ಲದಿರುವುದನ್ನು ಗಮನಿಸಬಹುದು.

ಕವಿತೆ, ಕಾವ್ಯ, ಮತ್ತು ಕೇವಲ ಬೌದ್ಧಿಕವಾಗಿ ಮಾತ್ರ ತಿಳುವಳಿಕೆಯನ್ನು ಒದಗಿಸುವ ಬೇರೆ ಬೇರೆ ಬಗೆಯ ಓದು ಇವುಗಳನ್ನು ಕುರಿತು ವಚನಕಾರರಿಗೆ ತಿರಸ್ಕಾರ ಧೋರಣೆಯೇ ಇದೆ.

ಕೀರ್ತಿನಾಥ ಕುರ್ತಕೋಟಿಯವರು, ವಚನಕಾರರು ಬಳಸಿದ ನಿರೂಪಣೆ ಮತ್ತು ಭಾಷೆಯ ಸ್ವರೂಪ ಕುರಿತು ಚರ್ಚಿಸುತ್ತಾರೆ. ಕನ್ನಡ ಕಾವ್ಯ ಅದುವರೆಗೆ ಕಥಾ ನಿರೂಪಣೆ ಮಾತ್ರವಾಗಿದ್ದುದು ವಚನಕಾರರಲ್ಲಿ ಆಧ್ಯಾತ್ಮಿಕ ಸತ್ಯ, ಅನುಭವ ಸತ್ಯ ಮತ್ತು ಆಚರಣೆಗಳ ಸತ್ಯಗಳ ನಿರೂಪಣೆಗೆ ಬಳಕೆಯಾಗುವಾಗ ಹಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು.

‘‘ ಕಲಚುರಿ ವಂಶದ ಬಿಜ್ಜಳನ ಕಲ್ಯಾಣದಲ್ಲಿ ಬಸವಣ್ಣನವರ ಮಹಾಮನೆಯಲ್ಲಿ ಅನುಭಾವ ಗೋಷ್ಠಿಯಲ್ಲಿ ತೊಡಗಿದ್ದ ಶಿವಶರಣರ ಸಂಖ್ಯೆ ಇನ್ನೂರಕ್ಕಿಂತಲೂ ಹೆಚ್ಚೆಂದು ಹೇಳಲಾಗುತ್ತದೆ. ಈ ಗೋಷ್ಠಿಯಲ್ಲಿ ಶರಣರಂತೆ ಶರಣೆಯರು ಇದ್ದುದು ಒಂದು ವಿಶೇಷ ಸಂಗತಿಯಾಗಿದೆ. ಕರ್ಮ ಕಾಂಡವನ್ನಳಿದು, ನಿಜದ ಅನ್ವೇಷಣೆಯಲ್ಲಿ ಪ್ರತಿಕ್ಷಣವೂ ತೊಡಗಿದ್ದ ಅನನ್ಯವಾದ ಭಕ್ತಿಯೇ ಜೀವಾಳವಾಗಿದ್ದ ಒಂದು ಧರ್ಮದ ಸೃಷ್ಟಿ ಕಾರ್ಯ ಇಲ್ಲಿ ನಡೆದಿತ್ತು. ಈ ಶರಣರೆಲ್ಲ ಕೂಡಿಕೊಂಡು ಕಾಲಕಾಲಕ್ಕೆ ತಮ್ಮ ಅನಿಸಿಕೆಗಳನ್ನು, ಸ್ವಾನುಭವವನ್ನು ದರ್ಶನವನ್ನು ವಚನಗಳ ಮೂಲಕ ಅಭಿವ್ಯಕ್ತಿಸಿದರು. ಕಾವ್ಯ ಸೃಷ್ಟಿ ಅವರ ಉದ್ದೇಶವಾಗಿರಲಿಲ್ಲ ನಿಜ. ಕಾವ್ಯದ ಬಗ್ಗೆ ತಮ್ಮ ನಿಲುವನ್ನು ಅವರೆಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಅನಿರ್ವಚನೀಯವಾದ ಸತ್ಯಕ್ಕೆ ಮಾತಿನ ಮೂಲಕವಾಗಿ ಅಭಿವ್ಯಕ್ತಿಯನ್ನೀಯುವಾಗ ಅಲ್ಲಿ ಹುಟ್ಟುವ ಸಮಸ್ಯೆಗಳ ಬಗ್ಗೆ ಶರಣರ ಅರಿವು ಪ್ರಖರವಾಗಿತ್ತೆಂಬುದರಲ್ಲಿ ಸಂದೇಹವೇ ಇಲ್ಲ. ಅವರ ಈ ಅರಿವು ಕನ್ನಡ ಭಾಷೆಯಲ್ಲಿ ಅಂತರ್ಗತವಾಗಿರುವ

ಅರಿವಿನ ಮೇಲೆ ಮೂಡಿದ ಪರಿಣಾಮ ಅನ್ಯಾದೃಶವಾಗಿರುವುದರಿಂದ ಸಾಹಿತ್ಯದ ದೃಷ್ಟಿಯಿಂದ
ವಚನಗಳನ್ನು ಪರಿಶೀಲಿಸ ಬೇಕಾಗುತ್ತದೆ''.

(ಕನ್ನಡ ಸಾಹಿತ್ಯ ಸಂಗಾತಿ: ೧೯೯೫: ಪು.ಸಂ. ೧೪೪ ರಿಂದ ೧೫೪)

೯. ವೇದ ಶಾಸ್ತ್ರಾಗಮ ಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ,
ಅವ ಕುಟ್ಟುತ್ತಲೇಕೆ ? ಅತ್ತಲಿತ್ತ ಹರಿವ ಮನದ ಶಿರವನರಿಯಬಲ್ಲಡೆ, ಬಚ್ಚ ಬರಿಯ
ಬಯಲು ಚೆನ್ನಮಲ್ಲಿಕಾರ್ಜುನ.

- ಅಕ್ಕ. (೧೦೭)

೧೦. ವೇದ ಶಾಸ್ತ್ರ ಆಗಮಂಗಳ ನೋಡಿದವರು ಹಿರಿಯರೆ ?
ಕವಿ ಗಮಕಿ, ವಾದಿ ವಾಗ್ಮಿಗಳು ಹಿರಿಯರೆ

ಬಸವಣ್ಣ (        )

೧೧. ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು ಮುಟ್ಟುವ
ತೆರನರಿಯದನ್ನಕ್ಕ ?

- ಬಸವಣ್ಣ (೭೯೮)

೧೨. ವೇದವೆಂಬುದು ಓದಿನ ಮಾತು, ಶಾಸ್ತ್ರವೆಂಬುದು ಸಂತೆಯ ಸುದ್ದಿ, ಪುರಾಣವೆಂಬುದು
ಪುಂಡರಗೋಷ್ಠಿ, ತರ್ಕವೆಂಬುದು ತಗರ ಹೋರಟೆ, ಭಕ್ತಿ ಯೆಂಬುದು
ತೋರುಂಬಲಾಭ ಗುಹೇಶ್ವರನೆಂಬುದು ಮೀರಿದ ಘನವು

-ಅಲ್ಲಮ (೮೭)

ವೇದ, ತರ್ಕ, ಅಕ್ಷರವಿದ್ಯೆ ಇವುಗಳ ಬಗ್ಗೆ ವಚನಕಾರರಿಗೆ ಅಪನಂಬಿಕೆ ಇದೆ. ಏಕೆಂದರೆ ಈ ಬಗೆಯ ವಿದ್ಯೆಗಳಲ್ಲಿ ಕೇವಲ ಮಾಹಿತಿಯಷ್ಟೇ ಲಭ್ಯವಾಗಲು ಸಾಧ್ಯ. ಮಾಹಿತಿ ಜ್ಞಾನವಲ್ಲ ಎಂಬುದು ವಚನಕಾರರ ನಿಲುವು. ಸ್ವಂತ ಅನುಭವದ ಮುಖಾಂತರ ಪಡೆದ ಅರಿವು ಮಾತ್ರ ಆಚರಣೆಯಲ್ಲೂ ವ್ಯಕ್ತಗೊಂಡು ಬದುಕು ಸಾರ್ಥಕವಾಗಬೇಕೆಂಬ ಧೋರಣೆ ವಚನಕಾರರಲ್ಲಿದೆ.

ಸ್ವಾನುಭವವನ್ನು ನಿವೇದಿಸುವುದಕ್ಕೆ ವಚನಕಾರರು ಹಲವು ದಾರಿಗಳನ್ನು ಕಂಡು ಕೊಂಡರು. ಈ ನಿವೇದನೆಯ ಅಂಶ ಬಹುತೇಕ ಎಲ್ಲ ವಚನಗಳಲ್ಲೂ ಕಾಣುತ್ತದೆ. ತನಗೆ ತಾನೇ ಹೇಳಿಕೊಂಡಂಥ ಸ್ವಗತಗಳು, ತನ್ನ ಇಷ್ಟ ದೈವಕ್ಕೆ ನಿವೇದಿಸಿದ ಮಾತುಗಳು ತನ್ನಂಥ ಇತರ ಶರಣರೊಡನೆ ಮಾಡಿದ ನಿವೇದನೆ ಮತ್ತು ಸಮಾಜದ ಇತರರ ಮನ ಒಲಿಸಿಕೊಳ್ಳಲು ಮಾಡಿದ ನಿವೇದನೆ ಎಂದು ಹಲವು ಬಗೆಯ ನಿವೇದನೆಗಳನ್ನು ವಚನಗಳಲ್ಲಿ ಕಾಣಬಹುದು.

ಈ ದೃಷ್ಟಿಯಿಂದ ನೋಡಿದರೆ ಒಬ್ಬೊಬ್ಬ ಶರಣನ ವಚನವೂ ನಿರ್ದಿಷ್ಟ ಗುಣಲಕ್ಷಣವುಳ್ಳದ್ದಾಗಿ ಕಾಣುತ್ತದೆ. ಆದರೆ ಈ ಎಲ್ಲ ಬಗೆಯ ನಿವೇದನೆಗಳ ಮೂಲಾಂಶಗಳನ್ನು ಗುರುತಿಸಿಕೊಂಡರೆ ಆ ಮೂಲಕ ವಚನ ರಚನೆಯಲ್ಲಿ ಸ್ವಾಭಿಮುಖತೆ ಮತ್ತು ಸಮಾಜಾಭಿಮುಖತೆಗಳ ಹದವನ್ನು ಸಾಧಿಸಿದ್ದುದು ಮನದಟ್ಟಾಗುತ್ತದೆ.

ಭಾಷೆಯಲ್ಲಿ ತಾನು ಕಟ್ಟಿದ ವಚನಗಳ ಬಗ್ಗೆ ಬಸವಣ್ಣನಿಗೆ ಇದ್ದ ಧೋರಣೆ ಎಂಥದ್ದೆನ್ನುವುದನ್ನು ಒಂದು ವಚನ ಸ್ಪಷ್ಟ ಪಡಿಸುತ್ತದೆ. ಈ ವಚನ ಕುರಿತು ಜಿ.ಎಸ್.ಶಿವರುದ್ರಪ್ಪ ಹೀಗೆ ವ್ಯಾಖ್ಯಾನಿಸುತ್ತಾರೆ. ''ವಚನಗಳಲ್ಲಿ ಕಂಡು ಬರುವ ಅನುಭವ ಕೇವಲ ವಾಗ್ರಚನೆಗೆ ಸಿಲುಕುವಂಥದ್ದಲ್ಲ ಅದರಾಚೆಯದು. ಉಳಿದ ಅನುಭವಗಳು ವಾಗ್ರಚನೆಗೆ ಸಿಕ್ಕಾವು. ಆದರೆ ಈ ಅನುಭವ 'ಅಂತರಂಗದ ರತ್ನ'. ಅತ್ಯಂತ ಅಮೂಲ್ಯವಾದದ್ದು, ಕೇವಲ ಆಂತರಿಕವಾದದ್ದು. ಆದುದರಿಂದ ಇಂಥ ಅನುಭವವನ್ನು ಹೇಳುವ ವಚನಗಳನ್ನು ವಾಗ್‌ರಚನೆಯ ಪಂಕ್ತಿಗೆ ನಿಲ್ಲುವ ಸಾಹಿತ್ಯದೊಂದಿಗೆ ಸಮೀಕರಿಸಲು ಒಪ್ಪದೆ ಅದಕ್ಕೂ ಮೀರಿದ ನೆಲೆಯಲ್ಲಿ ಪರಿಗಣಿಸತೊಡಗಿದರು.''

''ವಚನ ರಚನೆಗಳು ಆಗಲೇ ರೂಢಿಯಾದ, ಸಿದ್ಧ ಸಂಪ್ರದಾಯದ 'ವಾಗ್ ರಚನೆಗಳ' ಮಾಧ್ಯಮದಲ್ಲಿ ಅಭಿವ್ಯಕ್ತವಾಗತಕ್ಕವುಗಳಲ್ಲ. ಅವುಗಳೇ ಸಿದ್ಧರೂ ಸಿದ್ಧ ಸಂಪ್ರದಾಯದ ವಾಗ್ ರಚನೆಗಳ ನಿರಾಕರಣದಿಂದ ಒಳಗಿನ ಅನುಭಾವವು ಕೊಡುವಂಥ ಆಕಾರದಿಂದ ಮೂಡುತ್ತದೆ.

೧೩. ತಾಳ ಮಾನ ಸರಿಸವನರಿಯೆ

ಓಜೆ ಬಜಾವಣೆಯ ಲೆಕ್ಕವ ನರಿಯೆ

ಅಮೃತಗಣ ದೇವಗಣವನರಿಯೆ

ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ

ಆನು ಒಲಿದಂತೆ ಹಾಡುವೆ.

-ಬಸವಣ್ಣ (೪೯೪)

ಬಸವಣ್ಣನವರು ತಮಗೆ ಆಗಲೇ ಸಿದ್ಧವಾದ ವಾಗ್ರಚನೆಯ ವಿಧಾನಗಳು ತಿಳಿಯವು. ಈ ಕಾರಣದಿಂದ 'ಆನು ಒಲಿದಂತೆ ಹಾಡುವೆ' ಎನ್ನುತ್ತಾರೆ. ವಾಸ್ತವವಾಗಿ ಅದುವರೆಗಿನ ಕನ್ನಡ ಸಾಹಿತ್ಯದ ಹಿನ್ನೆಲೆಯಿಂದ ನೋಡಿದಾಗ, ಇದು ಒಂದು ಹೊಸ ಪ್ರತಿಭಟನೆಯ ಮಾತಾಗಿ ತೋರುತ್ತದೆ. ಯಾಕೆಂದರೆ ಅದುವರೆಗೂ ಇದ್ದ ವಸ್ತುನಿಷ್ಠ ಕಾವ್ಯ ಪರಂಪರೆಯಲ್ಲಿ ಬರೆಯುವ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ರಾಜಾಸ್ಥಾನ ಇತ್ಯಾದಿಗಳಿಗೆ ಕಾವ್ಯ ವಸ್ತುವಿನ ಆಯ್ಕೆಯನ್ನು ತನ್ನದಲ್ಲದ, ಆಗಲೇ ಸಿದ್ಧ ಪ್ರಸಿದ್ಧವಾದ ವಸ್ತುವಿಗೆ ಒಪ್ಪಿಸಿಕೊಂಡಂತ ಪರಿಸರದಲ್ಲಿ ಮೊಟ್ಟ ಮೊದಲಿಗೆ ಬಸವಣ್ಣನವರು ಸಿದ್ಧ ಪರಂಪರೆಯ ವಾಗ್ ರಚನೆಗಳನ್ನು ನಿರಾಕರಿಸಿ ಆನು ಒಲಿದಂತೆ ಹಾಡುವೆ ಎಂಬ ವ್ಯಕ್ತಿ ನಿಷ್ಠ ಸ್ವತಂತ್ರ ಮನೋಧರ್ಮದ ನೆಲೆಗೆ ಅಭಿವ್ಯಕ್ತಿಯನ್ನು ತಂದದ್ದರ ಘೋಷಣೆಯಾಗಿ ಇದು ಅತ್ಯಂತ ಗಮನಾರ್ಹವಾಗಿದೆ. 'ಆನು ಒಲಿದಂತೆ ಹಾಡುವೆ' ಎಂಬ ಈ ಮಾತು ಮುಂದೆ ಹರಿಹರನಲ್ಲಿ ಒಂದು ಮೂಲಭೂತ ಸಾಹಿತ್ಯಕ ಧೋರಣೆಯಾಗಿ ಕನ್ನಡ ಕಾವ್ಯ ಸಂಪ್ರದಾಯದಲ್ಲೇ ಹೊಸ ಹಾದಿಯನ್ನು ತೆರೆಯಿತೆಂಬುದನ್ನು ನೋಡಿದಾಗ, ಈ ಘೋಷಣೆ ಎಷ್ಟು ಮಹತ್ವದ್ದೆಂಬುದನ್ನು ಹೇಳಬೇಕಾಗಿಲ್ಲ.''

(ಜಿ.ಎಸ್. ಶಿವರುದ್ರಪ್ಪ : ೧೯೭೭: ಪು.ಸಂ. ೬)

ಜಿ.ಎಸ್.ಶಿವರುದ್ರಪ್ಪನವರ ಈ ವ್ಯಾಖ್ಯಾನ ದೊಂದಿಗೆ ಮತ್ತೊಂದು ಮಾತು ಸೇರಿಸಬಹುದು. 'ಆನು ಒಲಿದಂತೆ ಹಾಡುವೆ ' ಎಂಬುದು ಎಲ್ಲ ವಚನಕಾರರ ಧೋರಣೆಯೂ ಆಗಿದೆ. ಆದ್ದರಿಂದಲೇ ಬೇರೆ ಬೇರೆ ಕಾಯಕಗಳಲ್ಲಿ ತೊಡಗಿದ್ದ ವಚನಕಾರರು ತಮ್ಮ ತಮ್ಮ ಅನುಭವ ವಲಯದಿಂದ ಆಯ್ದ ಪ್ರತಿಮೆಗಳ ಮುಖಾಂತರ ತಮ್ಮದೇ ಆದ ಭಾಷಿಕ ನೆಲೆಗಳನ್ನು ಕಂಡುಕೊಂಡರು'ಆನು ಒಲಿದಂತೆ' ಎಂಬ ಮಾತನ್ನು ಇನ್ನು ಹಲವು ಬಗೆಯಲ್ಲಿ ವಿವರಿಸಿ ಕೊಳ್ಳುವುದು ಸಾಧ್ಯವಿದೆ. ತಾನು ತನ್ನ ಇಷ್ಟ ದೈವಕ್ಕೆ ಒಲಿದ ರೀತಿಯಲ್ಲಿ, ತನ್ನ ದೈವ ತನಗೆ ಒಲಿದ ರೀತಿಯಲ್ಲಿ, ತನ್ನ ಮನಸ್ಸು ಅನುಭವಕ್ಕೆ ಒಲಿದ ರೀತಿಯಲ್ಲಿ ಎಂದೆಲ್ಲ ಈ ಮಾತನ್ನು ವಿವರಿಸಿ ಕೊಳ್ಳಬಹುದು. ಹಾಗಾದಾಗ ಈ ಒಲಿಯುವಿಕೆ ವೈಯುಕ್ತಿಕ, ದೈವ ಭಕ್ತಿ ಸಂಬಂಧಿ, ಸಮಾಜ ಸಂಬಂಧಿಯಾಗಿ ಕಾಣತೊಡಗುತ್ತದೆ.



ಇದೇ ಎಳೆಯನ್ನು ಆಧರಿಸಿ ಕೀರ್ತಿನಾಥ ಕುರ್ತಕೋಟಿಯವರು ವಚನಗಳ 'ಕಾವ್ಯ ಶಾಸ್ತ್ರ' ವನ್ನು ಗುರುತಿಸುವ ಒಂದು ವಿಧಾನವನ್ನು ರೂಪಿಸಿದ್ದಾರೆ.



''ಶರಣರ ಸಂಬಂಧವೆಲ್ಲ ಅವರವರ ದೇವರೊಡನೆ. ಆದರೆ ಶರಣರಿಗೂ ಸಾಮಾಜಿಕತೆ ಇರುತ್ತದೆ. ಈ ಸಾಮಾಜಿಕತೆಗೂ ಅವರ ವೈಯುಕ್ತಿಕ ನಂಬಿಕೆಗೂ ನಿಕಟವಾದ ಸಂಬಂಧವೂ ಇದೆ. ಯಾವ ಕಾಯಕವೂ ಅನುಭವದ ಅಭಿವ್ಯಕ್ತಿಯಾಗಬಹುದಾದ್ದರಿಂದ ಶರಣನ ಕಾಯಕದಲ್ಲಿ ಶ್ರೇಷ್ಠ ಮತ್ತು ಕನಿಷ್ಠವೆಂಬ ಭಾವನೆಯಿಲ್ಲ. ಕಾಯಕ ಲಿಂಗಾರ್ಪಿತವಾಗಬೇಕು. ಲಿಂಗಾರ್ಪಿತವಾದ ಪ್ರಸಾದವನ್ನಷ್ಟೇ ಶರಣ ಉಣ್ಣಬೇಕು; ಇದೊಂದು ತಾತ್ತ್ವಿಕವಾದ ಆಚರಣೆ ನಿಜ. ಆದರೆ ಕಾಯಕ ಸಮಾಜಕ್ಕೆ ಸಲ್ಲುವುದರಿಂದ ಈ ಆಚರಣೆ ಸಾಮಾಜಿಕವೂ ಆಗುತ್ತದೆ. ಆದರಂತೆ ಶರಣನ ಕಾಯಕಕ್ಕೂ ಅವನ ಮಾತಿಗೂ ವ್ಯತ್ಯಾಸವಿಲ್ಲ. ಇಷ್ಟದೈವವನ್ನು ಪ್ರಮಾಣವಾಗಿಟ್ಟುಕೊಂಡು ಇವೆರಡೂ ನಡೆಯಬೇಕು. ಮಾತು ಮತ್ತು ಕಾಯಕ

ಇವೆರಡರ ಅವಿಭಾಜ್ಯ ಸಂಬಂಧದಿಂದಾಗಿ ಕಾಯಕ ಲಿಂಗಪೂಜೆಯ ಪ್ರತಿಮೆಯಾಗುತ್ತದೆ. ಮಡಿವಾಳ ಮಾಚಯ್ಯನ ಕೆಲಸವೆಂದರೆ ಬಟ್ಟೆಯನ್ನು ಮಡಿ ಮಾಡುವುದು. ಬಟ್ಟೆಗಳ ಜೊತೆಗೆ ಅವನು ಮನಸ್ಸನ್ನು, ಹೃದಯವನ್ನು, ಆಚಾರವನ್ನು ಮಡಿ ಮಾಡುತ್ತ ಹೋಗುತ್ತಾನೆ. ವಚನಗಳ ಕಾವ್ಯ ಶಾಸ್ತ್ರವನ್ನು ಇಲ್ಲಿ ಹುಡುಕಬೇಕಾಗುತ್ತದೆ. ವಚನಗಳಲ್ಲಿ ಉಪಯೋಗಿಸುವ ಪ್ರತಿಮೆಗಳನ್ನು ಅವರ ಕಾಯಕಗಳಲ್ಲಿ ಹುಡುಕಬೇಕಾಗುವದರಿಂದ ಅವರ ವಚನಗಳ ಭಾಷೆಯಲ್ಲಿ ನಿಷ್ಠುರವಾದ ಒಂದು ಸರಳತೆ

ಇದೆ. ಕಾಯಕದ ಹೊರಗಿನ ಪ್ರತಿಮೆಗಳನ್ನು ವಚನಗಳು ಉಪಯೋಗಿಸುವದಿಲ್ಲವೆಂದಲ್ಲ, ಆದರೆ ಅವೆಲ್ಲ ಕಾಯಕದ ಪ್ರತಿಮೆಗಳ ಸ್ತರದಲ್ಲಿಯೇ ಇರಬೇಕಾಗುತ್ತದೆ. ಶರಣರ ಮನಸ್ಸಿನಂತೆ ಶರಣರ ಕಾವ್ಯವೂ ಅಪರಿಗ್ರಹ ವ್ರತವನ್ನು ಹಿಡಿಯುತೆಂದು ಕಾಣುತ್ತದೆ. ಅಪರಿಗ್ರಹ ಸಾಮಾಜಿಕವೂ ಹೌದು, ಅಸಾಮಾಜಿಕವೂ ಹೌದು. ಸಮಾಜದಿಂದ ಏನನ್ನು ಬೇಡಲಾರೆನೆಂಬ ಆಗ್ರಹದಿಂದ ಸಮಾಜಕ್ಕೆ ಮನ್ನಣೆ ಕೊಟ್ಟಂತಾಯಿತು, ಅಲ್ಲದೆ ಸಾಮಾಜಿಕ ಹಂಗಿನಿಂದ ದೂರ ಉಳಿದಂತೆಯೂ ಆಯಿತು. ಜಂಗಮ ಸಮಾಜದಲ್ಲಿದ್ದುಕೊಂಡೇ ಅದರ ಹೊರಗೆ ಉಳಿಯುತ್ತಾನೆ. ಅವನ ಅಂಗದ ಮೇಲೆ ಸಂಗಮನಾಥನ ಗುರುತು ಮಾತ್ರ ಇರಬೇಕು''. (ಕೀರ್ತಿನಾಥ ಕುರ್ತಕೋಟಿ:೧೯೯೫:ಪು.ಸಂ. ೨೩)

## ವಚನಗಳ ಕಾವ್ಯ ತತ್ತ್ವ :

''ವಚನಕಾರರು ತಾವು ಬರೆದದ್ದು ಹೌದೋ ಅಲ್ಲವೋ ಎಂಬುದರ ಬಗ್ಗೆ ತಟಸ್ಥರಾಗಿದ್ದರೂ, ಇಂದು ನಾವು ಸಾಹಿತ್ಯವೆಂದು ಪರಿಗಣಿಸಿರುವುದರಿಂದ ' ಆನು ಒಲಿದಂತೆ ಹಾಡುವೆ ' ಎಂಬ ಬಸವಣ್ಣನವರ ಮಾತನ್ನು ನಾವು ವಚನಕಾರರ ಕಾವ್ಯ ತತ್ತ್ವ ಎಂದೇ ಪರಿಗಣಿಸುತ್ತೇವೆ.''

( ಜಿ.ಎಸ್. ಶಿವರುದ್ರಪ್ಪ:೧೯೭೭: ಪು.ಸಂ.೬)

ಹೀಗೆ ಗುರುತಿಸಬಹುದಾದ ಕಾವ್ಯ ತತ್ತ್ವದ ಕೆಲವು ಮುಖ್ಯಾಂಶಗಳೆಂದರೆ

ಅ. ಪರಂಪರೆಯ ಕಲ್ಪನೆ

ಆ. ಕಾವ್ಯ ಕ್ರಿಯೆಯ ಸ್ವರೂಪ

ಇ. ವಾಗ್ರಚನೆಯ ಸ್ವರೂಪ ಮತ್ತು

ಉ. ವಾಗ್ರಚನೆಯ ಪರಿಣಾಮ.

ಈ ಎಲ್ಲ ಅಂಶಗಳನ್ನು ವಚನಕಾರರು ಬಳಸುವ ನಿರ್ದಿಷ್ಟ ಪರಿಕಲ್ಪನೆಗಳ ಸಹಾಯದಿಂದ ರೂಪಿಸಿಕೊಳ್ಳಲು ಸಾಧ್ಯವಿದೆ.

## ಪರಂಪರೆಯ ಕಲ್ಪನೆ :

ಕವಿಯಾದವನು ಒಂದು ಸಾಹಿತ್ಯ ಪರಂಪರೆಗೆ ಸೇರಿದವನಾಗಿರುತ್ತಾನೆ. ಅಥವಾ ತನಗೆ ಅಗತ್ಯವಾದ ಪರಂಪರೆಯನ್ನು ಸೃಷ್ಟಿಸಿಕೊಳ್ಳುತ್ತಾನೆ. ಹಾಗೆಯೇ ಅವನು ಸಮಕಾಲೀನ ಸಾಹಿತ್ಯ ಪರಿಸರದಲ್ಲಿ ತನ್ನ ವಿಶಿಷ್ಟ ನಿಲುವನ್ನು ಸ್ಥಾಪಿಸಿ ಕೊಳ್ಳ ಬೇಕಾಗುತ್ತದೆ. ಈ ಸಾಹಿತ್ಯ ಪರಂಪರೆಯ ಪ್ರಶ್ನೆ ಕಾಲವನ್ನು ಕುರಿತ ಧೋರಣೆಯ ಪ್ರಶ್ನೆಯೂ ಹೌದು. ಅಲ್ಲಮನ ಒಂದು ವಚನ ಈ ಅಂಶವನ್ನು ವಿಶದ ಪಡಿಸುತ್ತದೆ.

೧೪. ಅರಿವು ಅರಿವನ್ನುತ್ತಿಪ್ಪರಿ, ಅರಿವು ಸಾಮಾನ್ಯವೇ ?

ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ, ನಿಂದ ಹೆಜ್ಜೆಯನರಿಯಬಾರದು.
ಮುಂದಣ ಹೆಜ್ಜೆಯಳಿದಲ್ಲದೆ, ಒಂದು ಪಾದ ನೆಲೆಗೊಳ್ಳದು. ನೆಲನ ಬಿಟ್ಟು,
ಆಕಾಶದಲ್ಲಿ ನಿಂದು ಮುಗಿಲೊಳಗೆ ಮಿಂಚಿದಲ್ಲದೆ ತಾನಾಗಬಾರದು.
ಗುಹೇಶ್ವರನೆಂಬುದು ಬರಿದೆ ಬಹುದೇ ಹೇಳಿರಿ

-ಅಲ್ಲಮ (೪೭೫)

ಈ ವಚನದಲ್ಲಿ ಬರುವ ಹಿಂದಣ ಹೆಜ್ಜೆ, ನಿಂದ ಹೆಜ್ಜೆಗಳನ್ನು ಪರಂಪರೆ ಮತ್ತು ಸಮಕಾಲೀನತೆಯ ಸಂಕೇತಗಳೆಂದು ನೋಡಲು ಸಾಧ್ಯವಿದೆ. ತನಗಿಂತ ಹಿಂದಿನ ಹೆಜ್ಜೆ ಗುರುತುಗಳನ್ನು ಕಾಣದೆ ಸಮಕಾಲೀನ ಸಾಹಿತ್ಯದ ಹೆಜ್ಜೆ ಗುರುತುಗಳನ್ನು ಅರಿಯಲಾಗದು. ಈ ಮಾತು ಇಡೀ ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ಇನ್ನು ಬೇರೆಯದಾದ ವಿಶಾಲ ವ್ಯಾಪ್ತಿಯಲ್ಲಿ ಅರ್ಥ ಪಡೆದುಕೊಳ್ಳುತ್ತದೆ.

ವಚನಕಾರರ ತತ್ತ್ವವನ್ನು ಒಂದು ಬಗೆಯ ನಿರಾಕರಣೆಯ ತತ್ತ್ವ ಎಂದು ಗುರುತಿಸ ಬಹುದು. ಅವರು ತಮಗಿಂತ ಹಿಂದಿನ ಕಾಲದಲ್ಲಿ ಸೃಷ್ಟಿಯಾಗಿದ್ದ ಸಾಹಿತ್ಯ ಕೃತಿಗಳ [illegible] ರಾಮಾಯಣ, ಮಹಾಭಾರತ, ವೈದಿಕ ಪುರಾಣಗಳು ಮುಂತಾದವನ್ನೆಲ್ಲ ನಿರಾಕರಿಸಿದರು. ಜಾತಿಯ ಅಸಮಾನತೆ, ಮೇಲು ಕೀಳಿನ ಭಾವ, ಯಜ್ಞಯಾಗಾದಿಗಳ ವ್ಯವಸ್ಥೆ ಮುಂತಾದವು ಅವರಿಂದ ನಿರಾಕರಣೆಗೆ ಒಳಗಾದವು. ಪ್ರಧಾನ ಸಂಸ್ಕೃತಿಯ ಹೆಜ್ಜೆ ಗುರುತುಗಳು ಸಮಾಜವನ್ನು ಎಲ್ಲಿಗೆ ತಲುಪಿಸಿವೆ

ಎಂಬುದನ್ನು ಅರಿತ ಅವರು ಎಚ್ಚರದ ಅರಿವಿನಲ್ಲಿ ಈ ಬಗೆಯ ಮಾರ್ಗವನ್ನು ನಿರಾಕರಿಸಿ ತಮ್ಮದೇ ಆದ ಹೊಸ ಪರಂಪರೆಯನ್ನು ಕಲ್ಪಿಸಿ ಕೊಂಡರು. ಆ ಪರಂಪರೆಯಲ್ಲಿ ಸ್ಥಳೀಯ ಮತ್ತು ನೆರೆಹೊರೆಯ ಪ್ರದೇಶಗಳ ಭಕ್ತರ ಜೀವನ ಚರಿತ್ರೆಗಳೇ ಮುಖ್ಯ ಆಕರಗಳಾಗಿದ್ದುವು.

ಭಾಷಿಕ ಅಭಿವ್ಯಕ್ತಿಗೆ ಸಂಬಂಧ ಪಟ್ಟಂತೆಯೂ ವಚನಕಾರರು ಅದುವರೆಗೆ ಸಾಹಿತ್ಯ ತುಳಿದ ಹಾದಿಯನ್ನು ನಿರಾಕರಿಸಿ ಹೊಸತೊಂದು ಮಾರ್ಗದ ಉದ್ಘಾಟನೆಗೆ ಕಾರಣರಾದರು. ಈ ನಿರಾಕರಣೆ ಮತ್ತು ಹೊಸ ಮಾರ್ಗದ ಸ್ಥಾಪನೆಯ ಹಿನ್ನೆಲೆಯಲ್ಲಿ ವಚನಕಾರರು ಕಾಲವನ್ನು ಕುರಿತು ತಾಳಿದ ಧೋರಣೆ ಪ್ರಮುಖ ಪಾತ್ರವಹಿಸಿದೆ.

> ೧೫. ಹಿಂದಣ ಅನಂತವನು, ಮುಂದಣ ಅನಂತವನು, ಒಂದು ದಿನ ಒಳಕೊಂಡಿತ್ತು
> ನೋಡಾ! ಒಂದು ದಿನವನೊಳಕೊಂಡು ಮಾತನಾಡುವ ಮಹಂತನ ಕಂಡು
> ಬಲ್ಲವರಾರಯ್ಯಾ? ಆದ್ಯರು ವೇದ್ಯರು ಅನಂತಹಿರಿಯರು ಲಿಂಗದಂತುವನರಿಯದೆ
> ಅಂತೆ ಹೋದರು ಕಾಣಾ ಗುಹೇಶ್ವರ
>
> - ಅಲ್ಲಮ (೪೩೫)

ಭೂತಕಾಲ ಮತ್ತು ಭವಿಷ್ಯತ್ತಿನ ಕಾಲಗಳೆರಡೂ ನಮ್ಮ ಅಗತ್ಯಗಳಿಗೆ ತಕ್ಕಂತೆ ನಮ್ಮ ಕಲ್ಪನೆ ಆಧರಿಸಿ ರೂಪುಗೊಳ್ಳುವಂಥವು, ಇರುವ ವಾಸ್ತವ ಎಂದರೆ ವರ್ತಮಾನ ಮಾತ್ರ ಎಂಬ ನಂಬಿಕೆ ವಚನಕಾರರದು. ಆದ್ದರಿಂದಲೇ ವಚನಗಳು ನಿಷ್ಠುರವಾಗಿ ವರ್ತಮಾನಕ್ಕೆ ಬದ್ಧವಾದ ರಚನೆಗಳು. ವಚನಕಾರರು ಮತ್ತೆ ಮತ್ತೆ ಬಳಸುವ ಪರಿಣಾಮ ಎಂಬ ಮಾತು ಕೂಡಾ ಇದೇ ನಿಲುವನ್ನು ವಿವರಿಸುತ್ತದೆ. ವಚನದ ಪರಿಣಾಮ ಕೇಳುವವರಿಗೆ ಈಗಲೇ ಈ ಕ್ಷಣದಲ್ಲೇ ಆಗಬೇಕಾದದ್ದು. ಅಂಥ ಪರಿಣಾಮವನ್ನು ಪ್ರಚೋದಿಸದ ವಚನ ನಿರುಪಯುಕ್ತವೆಂದೆ ವಚನಕಾರರ ನಂಬಿಕೆ. ಅಲ್ಲಮ, ಬಸವಣ್ಣನಂತಹ ವಚನಕಾರರು ತಮ್ಮ ಕಾಲದ ವರ್ತಮಾನವು ಮುಂದಿನ ಅನಂತವನ್ನು ಒಳಗೊಂಡಿದೆ - ಎಂಬ ವಿಶ್ವಾಸವನ್ನು ಹೊಂದಿದ್ದರಿಂದಲೇ ಇಂದು ಅವರ ಮಾತುಗಳಾಗಿಯೂ ನಮ್ಮ ಕಾಲದ ಮಾತುಗಳಾಗಿಯೂ ಕೇಳುತ್ತಿವೆ.

ಇತರ ಕವಿಗಳ ವಾಗ್ರಚನೆಯ ಪ್ರಭಾವಕ್ಕೆ ಒಳಗಾಗದೆ ಹಿಂದಿನ ಹೆಜ್ಜೆಯ ಅರಿವಿನೊಂದಿಗೆ ವರ್ತಮಾನದ ಸತ್ಯದ ನಂಬಿಕೆಯೊಂದಿಗೆ ಬರೆಯುವ ಕವಿ ತನ್ನ ಅನುಭವದ ಪ್ರಾಮಾಣಿಕತೆಗೆ ಮತ್ತು ಅಭಿವ್ಯಕ್ತಿಯ ಪ್ರಾಮಾಣಿಕತೆಗೆ ಬದ್ಧವಾಗಿರಬೇಕಾಗುತ್ತದೆ. ಅಲ್ಲಮನ ವಚನವೊಂದನ್ನು ಗಮನಿಸಬಹುದು.

೧೬. ''ಹಿಂದಣ ಕವಿಗಳೆನ್ನ ತೊತ್ತಿನ ಮಕ್ಕಳು

ಮುಂದಣ ಕವಿಗಳೆನ್ನ ಕರುಣದ ಕಂದಗಳು

ಆಕಾಶದ ಕವಿಗಳೆನ್ನ ತೊಟ್ಟಿಲ ಕೂಸು

ಹರಿ ಬ್ರಹ್ಮರೆನ್ನ ಕಕ್ಷಕುಳ

ನೀ ಮಾವ ನಾ ಸಳಿಯ ಗುಹೇಶ್ವರಾ.''

-ಅಲ್ಲಮ (೫೫೦)

ಅಲ್ಲಮನ ಈ ಮಾತು ಪರಂಪರೆ ಮತ್ತು ಸಮರ್ಥ ಕವಿಯೊಬ್ಬನ ಸಂಬಂಧವನ್ನು ಹೊಸ ಬೆಳಕಿನಲ್ಲಿ ಪರಿಶೀಲಿಸುವಂತೆ ಮಾಡುತ್ತವೆ. ಸಮರ್ಥನಾದ ಕವಿಯ ರಚನೆ ಹಿಂದಿಗಿಂತ ಅವನ ಕಾಲದ ಕೃತಿಗಳನ್ನು ಅವರ ನಂತರ ಬಂದ ಕವಿಗಳ ರಚನೆಗಳನ್ನು ಹೊಸದೊಂದು ವಿನ್ಯಾಸದಲ್ಲಿ ಅಳವಡಿಸಿ ನೋಡುವಂತೆ ಒತ್ತಾಯಿಸುತ್ತದೆ. ವಚನಗಳನ್ನು ನಾವು ಸಾಕಷ್ಟು ಗಮನ ಕೊಟ್ಟು ಅಧ್ಯಯನ ಮಾಡಿದ್ದರೆ ನಮ್ಮ ವಿಮರ್ಶಕರು ಈ ಅಂಶವನ್ನು ಟಿ. ಎಸ್. ಎಲಿಯಟ್‌ನಿಂದ ಕಲಿಯ ಬೇಕಾಗಿರಲಿಲ್ಲ.

ಕಾವ್ಯಕೃತಿಯ ಸ್ವರೂಪ:

೧೭. ಬಯಲ ರೂಪ ಮಾಡಬಲ್ಲಾತನೇ ಶರಣನು

ಆ ರೂಪ ಬಯಲ ಮಾಡಬಲ್ಲಾತನೇ ಲಿಂಗಾನುಭವಿ

ಬಯಲ ರೂಪ ಮಾಡಲರಿಯದಿದ್ದರೆ

ಎಂತು ಶರಣನೆಂಬೆ ಆ ರೂಪ ಬಯಲ ಮಾಡಲರಿಯದಿದ್ದರೆ

ಎಂತು ಲಿಂಗಾನುಭವಿ ಯೆಂಬೆ ? ಈ ಉಭಯ ವೊಂದಾದರೆ

ನಿಮ್ಮಲ್ಲಿ ತೆರಹುಂಟೇ ಕೂಡಲ ಸಂಗಮ ದೇವ ?

-ಬಸವಣ್ಣ (೪೯೫)

ಎಂಬ ಬಸವಣ್ಣನ ಮಾತು ಮೂಲತಃ ಶರಣನಿಗೂ ಲಿಂಗಾನುಭವಿಗೂ ಇರುವ ಪ್ರಮುಖ ವ್ಯತ್ಯಾಸದ ಕಡೆಗೆ ನಮ್ಮ ಗಮನ ಸೆಳೆಯುತ್ತದೆ. ಇದೇ ಮಾತನ್ನು ಕಾವ್ಯ ನಿರ್ಮಾಣ ಕ್ರಿಯೆಯ ವಿವರಣೆ ಎಂದು ಪರಿಗಣಿಸಲು ಸಾಧ್ಯವಿದೆ. ಕವಿಯಾದವನು ಬಯಲಿಗೆ ರೂಪ ಕೊಡುತ್ತಾನೆ. ಓದುಗನಾದವನು ಆ ರೂಪವನ್ನು ತನ್ನ ಅನುಭವದ ಬಯಲಾಗಿ ಪರಿವರ್ತಿಸಿ ಕೊಳ್ಳುತ್ತಾನೆ, ಎಂದು ವಿವರಿಸಲು ಸಾಧ್ಯವಿದೆ. ಅನುಭವ ಎನ್ನುವುದು ಒಂದು ಸ್ಥಿತಿ. ವ್ಯಕ್ತಿ ಮತ್ತು ವಸ್ತುಗಳ ಸಂಯೋಗದಿಂದ ಅನುಭವ ಉಂಟಾಗುತ್ತದೆ. ಶುದ್ಧ ರೂಪದ ಅನುಭವಕ್ಕೆ ಖಚಿತ ರೂಪದ ಆಕಾರ ಇರುವುದಿಲ್ಲ. ವ್ಯಕ್ತಿ ತನಗಾದ ಅನುಭವವನ್ನು ಪರಿಭಾವಿಸುತ್ತ ತನ್ನೊಳಗೆ ಒಂದು ರೂಪವನ್ನು ಕೊಟ್ಟು ವ್ಯಕ್ತ ಪಡಿಸುತ್ತಾನೆ. ಏಕೆಂದರೆ ರೂಪವೊಂದನ್ನು ನೀಡದೆ ಅನುಭವವನ್ನು ವ್ಯಕ್ತ ಪಡಿಸುವುದಕ್ಕೆ ಆಗುವುದಿಲ್ಲ. ರೂಪ ರಹಿತ ಅನುಭವವನ್ನು ತಿಳಿಸಲು ಹಂಚಿಕೊಳ್ಳಲು ಸಾಧ್ಯವಿಲ್ಲ.

ಕವಿಯ ಕೆಲಸವಾದರೂ ಇಂಥದ್ದೆ- ಅನುಭವಕ್ಕೆ ಆಕಾರ ಕೊಡುವ ಕೆಲಸ. ಕವಿಯ ಅನುಭವ ಒಂದು ಆಕಾರವನ್ನು ಪಡೆದು ಕೃತಿ ಎನಿಸಿಕೊಳ್ಳುತ್ತದೆ. ಈ ಕೃತಿ ಮಾತ್ರ ಓದುಗನಿಗೆ ದಕ್ಕುತ್ತದೆ. ಕೃತಿಯ ರೂಪದ ಮುಖಾಂತರವೇ ಓದುಗನು ರೂಪ ಒಳಗೊಂಡಿರುವ ಅನುಭವವನ್ನು ಅಥವಾ ಅದಕ್ಕೆ ನಿಕಟವಾದ ಅನುಭವವನ್ನು ತನ್ನದಾಗಿಸಿ ಕೊಳ್ಳುತ್ತಾನೆ. ರೂಪದ ಕಟ್ಟುಗಳನ್ನು ಒಡೆದು ಅನುಭವದ ಬಯಲನ್ನಾಗಿ ಮಾಡಿಕೊಳ್ಳುತ್ತಾನೆ. ಆಕಾರವಿಲ್ಲದ್ದು ಆಕಾರ ಪಡೆದು ಮತ್ತೆ ಓದುಗನಲ್ಲಿ ಮುಕ್ತವಾಗುವ ಕ್ರಿಯೆಯನ್ನು ಕಾವ್ಯ ಪ್ರಕ್ರಿಯೆಯ ಸ್ವರೂಪವೆಂದು ವಿವರಿಸಲು ಸಾಧ್ಯವಿದೆ.

ಈ ದೃಷ್ಟಿಯಿಂದ ನೋಡಿದಾಗ ಕಾವ್ಯ ಕ್ರಿಯೆಯಲ್ಲಿ ಕವಿ ಮತ್ತು ಓದುಗ ಇಬ್ಬರಿಗೂ ಸಮಾನವಾದ ಮಹತ್ವ ಲಭಿಸುತ್ತದೆ. ಅಲ್ಲಮನ ಒಂದು ವಚನವನ್ನು ಈ ಕಾವ್ಯ - ಕ್ರಿಯೆಯ ವಿವರಣೆ ಎಂದು ನೋಡಲು ಸಾಧ್ಯವಿದೆ.

೧೮. ಗುರು ಶಿಷ್ಯ ಸಂಬಂಧವನರಸಲೆಂದು ಹೋದರೆ

ತಾನೇ ಗುರುವಾದ

ತಾನೇ ಶಿಷ್ಯನಾದ

ತಾನೇ ಲಿಂಗವಾದ ಗುಹೇಶ್ವರಾ.

-ಅಲ್ಲಮ (೬೩)

ಪು.ತಿ.ನ.

ಗುರು,ಶಿಷ್ಯ, ಲಿಂಗ ಇವು ಬೇರೆ ಬೇರೆಯಲ್ಲ ಎಂಬ ಅಲ್ಲಮನ ಮಾತನ್ನು ಕವಿ, ಕೃತಿ, ಓದುಗರಿಗೂ ಅನ್ವಯಿಸಿ ಕೊಳ್ಳಬಹುದು. ಕಾವ್ಯ ಕ್ರಿಯೆಯು ಈ ಮೂರು ಘಟಕಗಳನ್ನು ಅಖಂಡವಾಗಿ ನೋಡುವ ದೃಷ್ಟಿ ಕನ್ನಡದ ಕಾವ್ಯ ಚಿಂತನೆಯ ಒಂದು ಮುಖ್ಯ ಅಂಶವಾಗಿದೆ ನಿದರ್ಶನಕ್ಕೆಂದು ಬೇಂದ್ರೆಯವರ '' ನಿನ್ನ ಮುಖ ಸ್ಪರ್ಶವೇ ಸಾಕು ಹೊಸ ಸೃಷ್ಟಿಯೇ ಬರಬಹುದು'' (ಪರಾಗ) ಮತ್ತು ರಾಮಚಂದ್ರ ಶರ್ಮರ '' ಒಂದೊಂದು ಕವನವು ಭರವಸೆಯ ವ್ಯವಸಾಯ, ಅಜ್ಞಾತದ ತೆಳಕ್ಕಿಳಿದು ಬಂದವನ ಭಾಗ್ಯ'' (ಮಾತು - ಮಾಟ) ಎಂಬ ಮಾತುಗಳನ್ನು ನೋಡಬಹುದು. ಕವಿ, ಕೃತಿ- ಓದುಗ ಇವುಗಳನ್ನು ಪ್ರತ್ಯೇಕವಾಗಿ ಸ್ವತಂತ್ರ ಘಟಕಗಳೆಂಬಂತೆ ನೋಡುವ ಧೋರಣೆ ಕಾವ್ಯಾನುಭವದ ಆಂಶಿಕ ಸತ್ಯವನ್ನು ಮಾತ್ರ ಗ್ರಹಿಸಬಲ್ಲದು. ಗುರು ಶಿಷ್ಯ ಮತ್ತು ಲಿಂಗ ಹೇಗೆ ಒಂದೇ ಅನುಭವದ ಮೂರು ಮುಖಗಳೋ ಹಾಗೆಯೇ ಕವಿ, ಕೃತಿ, ಓದುಗ ಎಂಬುದು ಕೂಡಾ ಒಂದೇ ಕಾವ್ಯಾನುಭವದ ಮೂರು ಮುಖಗಳು. ಲಿಂಗದ ಅನುಭವವನ್ನು ಪಡೆಯಲು ಶಿಷ್ಯನಿಗೆ ಗುರು ನೆರವಾಗುವಂತೆ, ಕಾವ್ಯಾನುಭವ ಪಡೆಯಲು ಓದುಗನಿಗೆ ಕೃತಿಯ ಮೂಲಕ ಕವಿ ನೆರವಾಗುತ್ತಾನೆ. ಬರೆಯುವವರೆಗೆ ಬರೆಯಬೇಕಾದ ಕವನ ಕವಿಗೆ ಅಜ್ಞಾತ ಹೇಗೋ ಹಾಗೆಯೇ, ಓದುವವರೆಗೆ ಆ ಕವನ ಓದುಗನಿಗೂ ಅಜ್ಞಾತವೆ. ಅಜ್ಞಾತವಾದದ್ದು ಮಾತಿನ ರೂಪ ಪಡೆದು ವ್ಯಕ್ತವಾದೀತು ಎಂಬ ಭರವಸೆ ಇಲ್ಲದೆ ಕವನ ರಚನೆ ಸಾಧ್ಯವೇ ಇಲ್ಲ ಅಂತೆಯೇ ಕವನದ ಓದಿನ ಮೂಲಕ ತನ್ನ ಪ್ರಜ್ಞೆಯಲ್ಲಿ ಅವ್ಯಕ್ತವಾಗಿದ್ದದ್ದು ಅಭಿವ್ಯಕ್ತವಾಗುತ್ತದೆ ಎಂಬ ಭರವಸೆ ಎಲ್ಲ ಓದಿನ ಕ್ರಿಯೆಯ ಹಿಂದಿರುವ ಮೂಲ ಪ್ರಚೋದನೆ.

ಈ ಅಂಶವನ್ನು ''ಅಭಿನವ ಭಾರತಿ'' ಹೀಗೆ ವಿವರಿಸುತ್ತದೆ. ''ಅಭಿವ್ಯಕ್ತಿ ಎನ್ನುವುದು ಒಂದು ಮನಸ್ಥಿತಿ, ರಸಾನುಭವದ ಮನಸ್ಥಿತಿ. ರಸವೆನ್ನುವುದು ಯಾವುದೇ ಒಂದು ಹೊಸ ಸೃಷ್ಟಿಯಲ್ಲ ಈಗಾಗಲೇ ಸಾಮಾಜಿಕನ ಮನಸ್ಸಿನಲ್ಲಿರುವುದೇ ಮುಕ್ತವಾಗಿ ಆನಂದಕರವಾಗಿ ವ್ಯಕ್ತವಾಗುವುದೇ ಅಭಿವ್ಯಕ್ತಿ''. ಈ ಅಭಿವ್ಯಕ್ತಿಗೆ ಪದಗಳು ಅವುಗಳ ಅರ್ಥಗಳು ನಿಮಿತ್ತವಾಗಿರುತ್ತದೆ. ಕಾವ್ಯ ಕ್ರಿಯೆ ಎನ್ನುವುದು ಅಭಿವ್ಯಕ್ತಿಯ ಪ್ರಕ್ರಿಯೆಯೇ ಆಗಿದೆ. ಧಾರ್ಮಿಕ ಪರಿಭಾಷೆಯಲ್ಲಿ ಭಕ್ತನಿಗೆ ದೈವಿಕ

ಅನುಭವವಾಗಲು ಗುರು ನಿಮಿತ್ತವಾಗುವಂತೆ ಕಾವ್ಯ ಕ್ರಿಯೆಯಲ್ಲಿ ಓದುಗನಿಗೆ ಕೃತಿಯು ಮುಖಾಂತರ ಕವಿ ನೆರವಾಗುತ್ತಾನೆ.

### ವಾಗ್ರಚನೆಯ ಸ್ವರೂಪ :

ಅಲ್ಲಮ ಮತ್ತು ಇತರ ವಚನಕಾರರು ಧಾರ್ಮಿಕ ಪರಿಭಾಷೆಯಲ್ಲಿ ಈ ಅಭಿವ್ಯಕ್ತಿ ಕ್ರಮದ ವಿವಿಧ ಮಗ್ಗಲುಗಳನ್ನು ಪರಿಶೀಲಿಸಿದ್ದಾರೆ. ಮುಖ್ಯವಾಗಿ ಅಲ್ಲಮನ ವಚನಗಳಲ್ಲಿ ಅಭಿವ್ಯಕ್ತಿಯನ್ನು ಕುರಿತ ಚಿಂತನೆಗಳು ಎದ್ದು ಕಾಣುತ್ತವೆ. ಈ ಚಿಂತನೆಯನ್ನು ಅಭಿವ್ಯಕ್ತಿಯ ಸ್ವರೂಪದ ತಾತ್ತ್ವಿಕ ಚಿಂತನೆ ಮತ್ತು ಅಭಿವ್ಯಕ್ತಿಗೆ ಮಾಧ್ಯಮವಾಗಿರುವ ಭಾಷೆಯ ಚಿಂತನೆ ಎಂದು ಎರಡು ನೆಲೆಗಳಲ್ಲಿ ಪರಿಶೀಲಿಸಬಹುದು. ವ್ಯಕ್ತ, ಅಭಿವ್ಯಕ್ತ ಎಂಬ ಕಲ್ಪನೆಗಳೆಲ್ಲ ಅವ್ಯಕ್ತ ಎಂಬುದರ ವಿರೋಧದಲ್ಲಷ್ಟೆ ಅರ್ಥವನ್ನು ಪಡೆಯುತ್ತವೆ.

೧೯. " ಕಲ್ಲೊಳಗಣ ಕಿಚ್ಚು ಉರಿಯದಂತೆ, ಬೀಜದೊಳಗಣ ವೃಕ್ಷ ಉಲಿಯದಂತೆ

ತೋರಲಿಲ್ಲಾಗಿ, ಬೀರಲಿಲ್ಲಾರಿಗೆಯು

ಗುಹೇಶ್ವರ ನಿಂದ ನಿಲುವ ಅನುಭಾವ ಸುಖ ಬಲ್ಲ."

(ಅಲ್ಲಮ. ವ. ಸಂ. ೨)

ಕಲ್ಲಿನೊಳಗೆ ಕಿಚ್ಚು ಇದೆ, ಬೀಜದೊಳಗೆ ವೃಕ್ಷ ಇದೆ. ಆದರೆ ಕಲ್ಲಿನೊಳಗಿನ ಕಿಚ್ಚು ಉರಿಯುವುದಿಲ್ಲ, ಬೀಜದೊಳಗಿರುವ ಮರ ಉಲಿಯುವುದಿಲ್ಲ. ಉರಿ ಮತ್ತು ವೃಕ್ಷಗಳೆರಡು ಅವ್ಯಕ್ತವಾಗಿವೆ. ಅವು ಅವ್ಯಕ್ತವಾಗಿರುವುದರಿಂದಲೇ ಆಕಾರ ರಹಿತವೂ ಅಗಮ್ಯವೂ ಆಗಿದೆ. ಹೀಗೆ ಅವ್ಯಕ್ತವಾದದ್ದು ಅಭಿವ್ಯಕ್ತವಾಗುವುದು ಸಾಧ್ಯವೇ ? ಅಭಿವ್ಯಕ್ತಿ ಒಡ್ಡುವ ಸಮಸ್ಯೆಗಳು ಯಾವುವು ? ಎಂಬ ಪ್ರಶ್ನೆಗಳು ಕಾವ್ಯ ಮೀಮಾಂಸೆಯ ಮುಖ್ಯ ಸಮಸ್ಯೆಗಳೂ ಆಗಿವೆ.

ಅಲ್ಲಮನ ಚಿಂತನೆಯಲ್ಲಿ ಅವ್ಯಕ್ತವು ಶುದ್ಧ ಮತ್ತು ಅಖಂಡವೆಂಬ ನಿಲುವು ಇರುವಂತೆ ತೋರುತ್ತದೆ.

೨೦. ರೂಪಿಂಗೆ ಕೇಡುಂಟು

ನಿರೂಪಿಂಗೆ ಕೇಡಿಲ್ಲ ( ೧೨೬೬ - ಅಲ್ಲಮ)

ಎಂಬ ಮಾತು ವ್ಯಕ್ತವಾದದ್ದರ ಬಗ್ಗೆ ಇರುವ ಧೋರಣೆಯನ್ನು ಸೂಚಿಸುತ್ತದೆ. ವ್ಯಕ್ತವಾದದ್ದು ನಾಶವನ್ನು ಹೊಂದುತ್ತದೆ ಎಂಬುದು ಒಂದು ಅರ್ಥವಾದರೆ ಅನುಭವದ ಅಖಂಡವಾದ ಪರಿಶುದ್ಧತೆ ಅಭಿವ್ಯಕ್ತಿಯಲ್ಲಿ ಹಾಗೇ ಉಳಿಯಲಾರದು ಎಂಬುದು ಇನ್ನೊಂದು ಅರ್ಥವಾಗಿರುವಂತೆ ತೋರುತ್ತದೆ. ಈ ನಿಲುವಿಗೆ ಕಾರಣವೇನೆಂದರೆ ಅನುಭವ ಎಂಬುದು ಹಿಂದೆಯೇ ಹೇಳಿದಂತೆ ವ್ಯಕ್ತಿ ಮತ್ತು ವಸ್ತುಗಳ ನೇರ ಸಂಯೋಗದಿಂದ ಲಭಿಸುವಂಥದ್ದು. ಅಭಿವ್ಯಕ್ತಿಯಾದರೂ ಮತ್ತೊಂದು ಮಾಧ್ಯಮವನ್ನು ಆಶ್ರಯಿಸಿಯೇ ರೂಪ ಪಡೆಯುವಂಥದ್ದು. ಅಭಿವ್ಯಕ್ತಿಯ ಮಾಧ್ಯಮ ಅನುಭವದ ಶುದ್ಧ ಸ್ವರೂಪವನ್ನು ಪರಿವರ್ತಿಸುತ್ತದೆ, ಕಲುಷಿತಗೊಳಿಸುತ್ತದೆ, ಅಥವಾ ಅನುಭವವನ್ನು ಹಿಡಿದಿಡುವಲ್ಲಿ ವಿಫಲವಾಗುತ್ತದೆ ಎಂಬ ಧೋರಣೆ ಅಲ್ಲಮನಲ್ಲಿ ಇರುವಂತಿದೆ. ಅವನ ಇನ್ನೊಂದು ವಚನ ಅಭಿವ್ಯಕ್ತಿ ಮಾಧ್ಯಮದ ಬಗ್ಗೆ ಇರುವ ಅಪನಂಬಿಕೆಯನ್ನು ಸೂಚಿಸುವಂತಿದೆ.

೧೦. ನಿರಾಳವೆಂಬ ಕೂಸಿಂಗೆ
ಬೆಣ್ಣೆಯನಿಕ್ಕಿ, ಹೆಸರಿಟ್ಟು ಕರೆದವರಾರು
ಅಕಟಕಟ ಶಬ್ದದ ಲಜ್ಜೆಯ ನೋಡಾ (೧೬೪-ಅ)

ಈ ವಚನದಲ್ಲಿ ನಿರಾಳವನ್ನು ಒಂದು ಹೆಸರಿಗೆ, ಅರ್ಥಕ್ಕೆ ಬದ್ಧಗೊಳಿಸುವ ಭಾಷೆಯ ವಿಫಲ ಪ್ರಯತ್ನವನ್ನು ಅಲ್ಲಮ ಹೇಳುವಂತೆ ಕಾಣುತ್ತದೆ. ಅಭಿವ್ಯಕ್ತಿಸಬೇಕಾದದ್ದು ಭಾಷೆಯ ಆಚೆಗಿದೆ. ಅದನ್ನು ಶಬ್ದದಲ್ಲಿ ಹೇಳುವುದು ಶಬ್ದವೇ ನಾಚುವ ಕೆಲಸ. ಭಾಷೆ ಎನ್ನುವುದು ಒಂದು ವ್ಯವಸ್ಥೆ. ಅರ್ಥವೆನ್ನುವುದು ಭಾಷಾ ವ್ಯವಸ್ಥೆಯ ಕೂಸು. ಇದರ ಆಚೆಗೆ ಇರುವುದೆಲ್ಲ ಆಕಾರ ರಹಿತ ಶುದ್ಧ ಅಖಂಡ ಇರುವಿಕೆ. ಅದಕ್ಕೆ ಎಂದೂ ಕೇಡಿಲ್ಲ. ಏಕೆಂದರೆ, ಅದು ಅರ್ಥ ಅಲ್ಲ.

೧೧. ಹಿಡವ ಕೈಯ ಮೇಲೆ ಕತ್ತಲೆಯಯ್ಯ
ನೋಡುವ ಕಂಗಳ ಮೇಲೆ ಕತ್ತಲೆಯಯ್ಯ
ನೆನೆವ ಮನದ ಮೇಲೆ ಕತ್ತಲೆಯಯ್ಯ
ಕತ್ತಲೆ ಎಂಬುದು ಇತ್ತಲೆಯಯ್ಯ
ಗುಹೇಶ್ವರ ನೆಂಬುದು ಅತ್ತಲೆಯಯ್ಯ -ಅಲ್ಲಮ (೨೧೬)

ಅರ್ಥವಲ್ಲದ ಕೇವಲ ಇರುವಿಕೆ ಮಾತ್ರ ಅನುಭವವನ್ನು ಗ್ರಹಿಸಲು ಮನುಷ್ಯನಿಗಿರುವ ಎಲ್ಲ ಪರಿಕರಗಳಾದ ಕೈ, ಕಣ್ಣು, ಮನಸ್ಸುಗಳಿಗೆ ಕತ್ತಲೆ ಕವಿದಿದೆ. ಹೀಗಿರುವಾಗ ಕೈ, ಕಣ್ಣು, ಮನಸ್ಸುಗಳ ಸಹಯೋಗದಿಂದ ಸೃಷ್ಟಿಗೊಂಡಿರುವ ಭಾಷೆ ಎಂಬ ಮಾಧ್ಯಮ ಅನುಭವವನ್ನು ಅಭಿವ್ಯಕ್ತಿಸಬಲ್ಲದೇ ಎಂಬ ಪ್ರಶ್ನೆಯನ್ನು ಅಲ್ಲಮನ ಈ ವಚನ ನಮ್ಮ ಮುಂದೊಡ್ಡುತ್ತದೆ.

೨೩ ಶಿಲೆಯೊಳಗಣ ಪಾವಕನಂತೆ ಉದಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಃಶಬ್ದದಂತೆ
ಗುಹೇಶ್ವರಾ ನಿಮ್ಮ ಶರಣರ ಸಂಬಂಧ.

(೧-ಅಲ್ಲಮ)

ಅಭಿವ್ಯಕ್ತಿಯ ಶಾಬ್ದಿಕ ನೆಲೆಯನ್ನು ಕುರಿತು ಅಲ್ಲಮನ ಮಾತುಗಳನ್ನು ಪರಿಶೀಲಿಸಬಹುದು. ಶಬ್ದ-ನಿಃಶಬ್ದಗಳ ದ್ವಂದ್ವ ಹೆಚ್ಚು ಕಡಿಮೆ ಎಲ್ಲ ವಚನಕಾರರನ್ನು ಕಾಡಿದೆ. ವಚನಕಾರರು ವ್ಯಕ್ತಕ್ಕಿಂತ ಅವ್ಯಕ್ತಕ್ಕೆ, ಶಬ್ದಕ್ಕಿಂತ ನಿಃಶಬ್ದಕ್ಕೆ, ಸ್ಥೂಲಕ್ಕಿಂತ ಸೂಕ್ಷ್ಮಕ್ಕೆ ಪ್ರಾಮುಖ್ಯ ನೀಡುತ್ತಾರೆ.

ಆದರೂ ಶಬ್ದದ ಪ್ರಮುಖ್ಯವನ್ನು ಅವರು ಪೂರ್ಣವಾಗಿ ಅಲ್ಲಗಳೆಯುವುದಿಲ್ಲ. ತತ್ತ್ವಶಾಸ್ತ್ರವು ಯಾವುದನ್ನು ನಿರಾಕಾರ ಅಥವಾ ಅವ್ಯಕ್ತ ಎನ್ನುತ್ತದೆಯೋ ಅದನ್ನು ನಿಃಶಬ್ದ ಎಂಬ ಪರಿಕಲ್ಪನೆಯೊಂದಿಗೆ ಸಮೀಕರಿಸಬಹುದು. ಅಂತೆಯೇ ಆಕಾರ ಮತ್ತು ವ್ಯಕ್ತ ಎಂಬುದನ್ನು ಶಬ್ದ ಎಂದು ಪರಿಗಣಿಸಬಹುದು. ಸಾಹಿತ್ಯದಲ್ಲಿ ಶಬ್ದ ಎಂಬುದು ಪದರೂಪದಲ್ಲಿರುವ ನಾದರೂಪದಲ್ಲಿ ಮನಸ್ಸನ್ನು ಹೊಗುವ ಶಬ್ದವಾಗುತ್ತದೆ. ಶಬ್ದ ರೂಪದ ಮೂಲಕ ಪಡೆಯುವ ಅನುಭವವನ್ನು ನಿಃಶಬ್ದವೆಂದು ಸೂಚಿಸ ಬಹುದು.

ಅಲ್ಲಮನ ವಚನವು ದೈವೀ ಅನುಭವವನ್ನು ಹೇಳುವ ಅನುಭಾವಿಯ ಮಾತು. ಆದರೆ ಇದನ್ನು ಕಾವ್ಯಾನುಭವ ಸ್ವರೂಪದ ವರ್ಣನೆಯೆಂದು ಜಿ.ಎಸ್. ಶಿವರುದ್ರಪ್ಪ ಹೇಳುತ್ತಾರೆ. ''ಕಾವ್ಯಾನುಭವದ ನಿಲುವು ಇದೇ, ಶಬ್ದದೊಳಗಣ ನಿಃಶಬ್ದದಂತೆ. ಆಕಾರದ ಮೂಲಕ - ನಿರಾಕಾರಕ್ಕೆ ಶಬ್ದದ ಮೂಲಕ ನಿಃಶಬ್ದಕ್ಕೆ ಹೋಗುವ ಆಸ್ವಾದ ಕ್ರಿಯೆ ಇದು. ಅನುಕ್ತವಾದರೂ ಅರಿವಿಗೆ ಬರುವ

ಅರ್ಥರಮ್ಯತೆಯು ಅನುರಣನವನ್ನೇ ಅಲಂಕಾರಿಕರು ಧ್ವನಿ ಎಂದು ವರ್ಣಿಸುತ್ತಾರೆ. ಈ ಅನುಭವವನ್ನು ಚಿತ್ತವಿಶ್ರಾಂತಿ ಎಂದೂ, ವಿಗಲಿತ ವೇದ್ಯಾಂತರ ಎಂದೂ ಕರೆದಿದ್ದಾರೆ.''

ಶಿವರುದ್ರಪ್ಪನವರ ಮಾತನ್ನು ಇನ್ನು ಹಲವು ದಿಕ್ಕುಗಳಲ್ಲಿ ವಿಸ್ತರಿಸುವುದು ಸಾಧ್ಯವಿದೆ. ಜಾರ್ಜ್ ಸ್ಟೀನರ್ ಎಂಬ ಚಿಂತಕನು ಇಡೀ ವಿಶ್ವದಲ್ಲಿ ನಿಃಶಬ್ದವನ್ನು ಸೀಳಿ ಅರ್ಥಪೂರ್ಣ ಶಬ್ದವನ್ನು ಉತ್ಪಾದಿಸುವ ಜೀವಿ ಮನುಷ್ಯ ಮಾತ್ರ ಎಂದು ಹೇಳುತ್ತಾನೆ. ಶಬ್ದ ಸೃಷ್ಟಿಯ ಮುನ್ನ ಮತ್ತು ಶಬ್ದ ಸೃಷ್ಟಿಯ ನಂತರ ಉಳಿಯುವುದು ನಿಃಶಬ್ದ ಮಾತ್ರ. ಕವನ ಒಂದರ ಅರ್ಥಾನುಭವ ಅದರ ಶಬ್ದಗಳಿಂದ ಆಗುವುದಕ್ಕಿಂತ ಹೆಚ್ಚಾಗಿ ಶಬ್ದಗಳ ನಡುವಿನ ನಿಃಶಬ್ದದಲ್ಲಿ ಓದುಗನ ಮನಸ್ಸು ಕಾವ್ಯದ ಪ್ರತಿಮೆಗಳನ್ನು ಮೂಡಿಸಿ, ಬೆಳಸಿ, ಅನುಭವಿಸುತ್ತದೆ. ಕವನವನ್ನು ಓದುಗನ ದೃಷ್ಟಿಯಿಂದ ನೋಡಿದಾಗ ಶಬ್ದದ ಬಳಕೆಯ ವಿನ್ಯಾಸ ಎನ್ನುವುದಕ್ಕಿಂತ ನಿಃಶಬ್ದ ವಿನ್ಯಾಸ ಎಂದು ನೋಡುವುದೇ ಸೂಕ್ತ. ಸಮಾಜ ಮತ್ತು ಕಾವ್ಯಗಳಿಗೆ ಇರುವ ಸಂಬಂಧವನ್ನು ವಿವರಿಸುವುದಕ್ಕೆ ಕೂಡ ಶಬ್ದದೊಳಗಣ ನಿಃಶಬ್ದಂತೆ ಎಂಬ ಸೂತ್ರವನ್ನು ಅನ್ವಯಿಸಬಹುದು. ಸಾಮಾಜಿಕ ಪರಿಸ್ಥಿತಿಗಳು ಮನುಷ್ಯಾನುಭವದ ಕೆಲವು ವಲಯಗಳನ್ನು ಶಬ್ದರೂಪದಲ್ಲಿ ಅಭಿವ್ಯಕ್ತಿಸುವುದಕ್ಕೆ ಪ್ರತಿರೋಧವನ್ನು ಒಡ್ಡುತ್ತವೆ. ಪ್ರಭಾವ ಮತ್ತು ಅಧಿಕಾರ ಹೀನರಾದ ಜನವರ್ಗಕ್ಕೆ ಸೇರಿದ ವ್ಯಕ್ತಿ ಸೃಷ್ಟಿಸುವ ಸಾಹಿತ್ಯಿಕ ಅಭಿವ್ಯಕ್ತಿಯಲ್ಲಿ ಅವರು ಏನನ್ನು ಹೇಳಿದ್ದಾರೆ ಎಂಬುದಷ್ಟೇ ಅಲ್ಲದೆ ಏನನ್ನು ಹೇಳದೆ ಮೌನ ವಹಿಸಿದ್ದಾರೆ ಎಂಬುದೂ ಮುಖ್ಯವಾಗುತ್ತದೆ. ಕೆಲವು ಸಂಗತಿಗಳ ಬಗ್ಗೆ ನಿಃಶಬ್ದವಾಗಿರುವಂತೆ ಒತ್ತಾಯಿಸುವ ಸಾಮಾಜಿಕ ಪರಿಸ್ಥಿತಿಯನ್ನು ಉಲ್ಲಂಘಿಸುವುದಕ್ಕೆಂದೇ ಕವಿಗಳು ಅನ್ಯೋಕ್ತಿ, ಸಾಂಕೇತಿಕತೆ ಮುಂತಾದ ತಂತ್ರಗಳಿಗೆ ಶರಣು ಹೋಗಿದ್ದಾರೆ. ರಾಜಕೀಯ ದಬ್ಬಾಳಿಕೆ ಇರುವ ಸನ್ನಿವೇಶಗಳಲ್ಲಿ ಸೃಷ್ಟಿಯಾದ ಸಾಹಿತ್ಯ ಬಹುಪಾಲು ಈ ಬಗೆಯದೇ ಆಗಿರುತ್ತದೆ. ಆದ್ದರಿಂದ ಸಾಮಾಜಿಕ ದೃಷ್ಟಿಕೋನವನ್ನು ಆಧರಿಸಿ ಸಾಹಿತ್ಯ ಕೃತಿಗಳ ಪರಿಶೀಲನೆ ಮಾಡುವಾಗ ಕೂಡ ''ಹೇಳಿದ್ದು'' ಮತ್ತು ''ಹೇಳದೆ ಬಿಟ್ಟದ್ದು'' ಇವುಗಳ ಸಂಬಂಧ ಮತ್ತು ಹೇಳದೆ ಬಿಟ್ಟದ್ದಕ್ಕೆ ಕಾರಣಗಳು ಕೂಡಾ ಮುಖ್ಯವಾಗುತ್ತವೆ. ಅಂದರೆ ಶಬ್ದದೊಳಗೆ ಅಡಗಿರುವ ನಿಃಶಬ್ದದ ಸ್ವರೂಪವನ್ನು, ಕಾರಣವನ್ನು ತಿಳಿಯಬೇಕಾಗುತ್ತದೆ.

'ವಚನಗಳ ಸುತ್ತ ಮುತ್ತ ಅನಭಿವ್ಯಕ್ತವಾದ ನಿಃಶಬ್ದ' ಇರುವುದರಿಂದಲೇ 'ವಚನಗಳು ಮಾತಿನ ಮೂಲಕ ಹೇಳಲಾರದನ್ನು ಮಾತಿನ ಮೂಲಕವೇ ಹೇಳಲು' ಸಾಧ್ಯವಾಯಿತು ಎಂದು ಕುರ್ತಕೋಟಿಯವರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದಲೇ ಸ್ಥಾವರ, ಜಂಗಮ, ಕಾಯಕ, ಪ್ರಸಾದ ಮುಂತಾದ ವಚನಕಾರರು ಬಳಸುವ ಅನೇಕ ಪಾರಿಭಾಷಿಕ ಶಬ್ದಗಳು, ಪಾರಿಭಾಷಿಕತೆಯನ್ನು ಮೀರಿ ಬೇರೆ ಅರ್ಥಗಳನ್ನು ಹುಟ್ಟಿಸಲು ಸಮರ್ಥವಾದವು ಎಂದು ಅವರು ಅಭಿಪ್ರಾಯ ಪಡುತ್ತಾರೆ.

ಅನುಭವವು ನಿಃಶಬ್ದ ಮತ್ತು ಭಾಷೆಯ ಆಚೆಗಿನದು ಎಂದು ವಚನಕಾರರು ನಂಬಿದ್ದರೂ ಅದಕ್ಕೆ ಶಬ್ದ ರೂಪವನ್ನು ಕೊಡಿಸದೆ ಬೇರೆ ವಿಧಿಯಿಲ್ಲ ಎಂದು ತಿಳಿದಿದ್ದಾರೆ. ಅರ್ಥ ಅಥವಾ ಅಭಿವ್ಯಕ್ತಿಸ ಬೇಕಾದ ಸಂಗತಿ ಭಾಷೆಯ ಆಚೆನದು ಎಂದು ಹೇಳುವುದಕ್ಕೂ ಭಾಷೆಯೇ ಬೇಕಾಗಿದೆ. 'ನಿರೂಪಕ್ಕೆ ಕೇಡಿಲ್ಲ' ನಿಜ ಆದರೂ ರೂಪ ಎಂಬುದಿಲ್ಲದೆ ನಿರೂಪಕ್ಕೆ ಅರ್ಥವಿಲ್ಲ.

೨೪. " ರತ್ನ ದೀಪ್ತಿಯಾದಡೇನು
ಬಂಧಿಸಿದ ಕುಂದಣದಲ್ಲಿಯೆ ಸಂದಿರಬೇಕು
ಸ್ವಾದು ರಸದ ರುಚಿಯನಿವ ಫಲವೆಂದಡೇನು
ವೃಕ್ಷವಿಲ್ಲದನ್ನಕ್ಕರ ಚಿತ್ತ ಸೌಂದರ್ಯ ನೋಟಕ್ಕೆ ಸುಖವೆಂದಡೇನು
ಭಿತ್ತಿಯ ಪಟ ಮುಖ್ಯ ಸ್ಥಾನವಿಲ್ಲದನ್ನಕ್ಕರ - ಅಲ್ಲಮ (೧೦೮೯)

ಅವ್ಯಕ್ತವಾದ ಬೆಳಕು ಕಣ್ಣಿಗೆ ವಸ್ತುವಾಗುವುದಕ್ಕೆ ಕುಂದಣದ, ಅವ್ಯಕ್ತವಾದ ಹಣ್ಣಿನ ರುಚಿ ವ್ಯಕ್ತವಾಗಲು ವೃಕ್ಷದ ಆಸರೆ, ನೋಟವು ಮನಸ್ಸಿನ ಸುಖವಾಗುವುದಕ್ಕೆ ಭಿತ್ತಿಯ ಪಟ ಪ್ರಾಮುಖ್ಯಗಳಿಸುವುದು ಅನಿವಾರ್ಯ. ಅನುಭವವೊಂದು ಅನುಭವವೆಂದು ನಮ್ಮ ಅರಿವಿಗೆ ಬರಬೇಕಾದರೆ ಮಾಧ್ಯಮವೊಂದು ಅಗತ್ಯವಾಗುತ್ತದೆ. ಶಬ್ದಕ್ಕೆ ಲಜ್ಜೆಯಾಗುವುದೆಂದರೂ ಶಬ್ದದೊಳಗಿನ ನಿಃಶಬ್ದವನ್ನನುಭವಿಸುವುದು ನಿಜವಾದ ಅಭಿವ್ಯಕ್ತಿ. ಶಬ್ದ ನಿಃಶಬ್ದಗಳ ಐಕ್ಯ ಎಂಬುದೇ ಅಭಿವ್ಯಕ್ತಿಯನ್ನು ಕುರಿತ ಅಲ್ಲಮನ ಚಿಂತನೆಯ ಮೂಲದಲ್ಲಿದೆ.

ಗುರು, ಶಿಷ್ಯ, ಲಿಂಗ ಇವು ಬೇರೆ ಬೇರೆಯಲ್ಲ ಎಂಬ ಅಲ್ಲಮನ ಮಾತನ್ನು ಕವಿ. ಕೃತಿ. ಓದುಗರಿಗೂ ಅನ್ವಯಿಸಿ ಕೊಳ್ಳಬಹುದು. ಕಾವ್ಯ ಕ್ರಿಯೆಯು ಈ ಮೂರು ಘಟಕಗಳನ್ನು ಅಖಂಡವಾಗಿ ನೋಡುವ ದೃಷ್ಟಿ ಕನ್ನಡದ ಕಾವ್ಯ ಚಿಂತನೆಯ ಒಂದು ಮುಖ್ಯ ಅಂಶವಾಗಿದೆ ನಿದರ್ಶನಕ್ಕೆಂದು ಬೇಂದ್ರೆಯವರ '' ನಿನ್ನ ಮುಖ ಸ್ಪರ್ಶವೇ ನಾಕು ಹೊಸ ಸೃಷ್ಟಿಯೇ ಬರಬಹುದು'' (ಪರಾಗ) ಮತ್ತು ರಾಮಚಂದ್ರ ಶರ್ಮರ '' ಒಂದೊಂದು ಕವನವು ಭರವಸೆಯ ವ್ಯವಸಾಯ, ಅಜ್ಞಾತದ ತೆಳಕ್ಕಿಳಿದು ಬಂದಾದ ಭಾಗ'' (ಮಾತು - ಮಾಟ) ಎಂಬ ಹೇಳಿಕೆಗಳನ್ನು ನೋಡಬಹುದು. ಕವಿ, ಕೃತಿ- ಓದುಗ ಇವುಗಳನ್ನು ಪ್ರತ್ಯೇಕವಾಗಿ ಸ್ವತಂತ್ರ ಘಟಕಗಳಂತೆ ನೋಡುವ ಧೋರಣೆ ಕಾವ್ಯಾನುಭವದ ಆಂತಿಕ ಸತ್ಯವನ್ನು ಮಾತ್ರ ಗ್ರಹಿಸಬಲ್ಲದು. ಗುರು ಶಿಷ್ಯ ಮತ್ತು ಲಿಂಗ ಹೇಗೆ ಒಂದೇ ಅಪೇಕ್ಷಿಸುವ ಕಾಳಜ ತಂದದ್ದು ಮತ್ತೊಂದು ಬಗೆ ಎನ್ನಬಹುದು. ಅನುಭವದ ಮೂರು ಮುಖಗಳೋ ಹಾಗೆಯೇ ಕವಿ, ಕೃತಿ, ಓದುಗ ಎಂಬುದು ಕೂಡಾ ಒಂದೇ ಕಾವ್ಯಾನುಭವದ ಮೂರು ಮುಖಗಳು. ಲಿಂಗದ ಅನುಭವವನ್ನು ಪಡೆಯಲು ಶಿಷ್ಯನಿಗೆ ಗುರು ನೆರವಾಗುವಂತೆ, ಕಾವ್ಯಾನುಭವ ಪಡೆಯಲು ಓದುಗನಿಗೆ ಕೃತಿಯ ಮೂಲಕ ಕವಿ ನೆರವಾಗುತ್ತಾನೆ. ಬರೆಯುವವರೆಗೆ ಬರೆಯಬೇಕಾದ ಕವನ ಕವಿಗೆ ಅಜ್ಞಾತ ಹೇಗೋ ಹಾಗೆಯೇ, ಓದುವವರೆಗೆ ಆ ಕವನ ಓದುಗನಿಗೂ ಅಜ್ಞಾತವೆ. ಅಜ್ಞಾತವಾದದ್ದು ಮಾತಿನ ರೂಪ ಪಡೆದು ವ್ಯಕ್ತವಾದೀತು ಎಂಬ ಭರವಸೆ ಇಲ್ಲದೆ ಕವನ ರಚನೆ ಸಾಧ್ಯವೇ ಇಲ್ಲ ಅಂತೆಯೇ ಕವನದ ಓದಿನ ಮೂಲಕ ತನ್ನ ಪ್ರಜ್ಞೆಯಲ್ಲಿ ಅವ್ಯಕ್ತವಾಗಿದ್ದದ್ದು ಅಭಿವ್ಯಕ್ತವಾಗುತ್ತದೆ ಎಂಬ ಭರವಸೆ ಎಲ್ಲ ಓದಿನ ಕ್ರಿಯೆಯ ಹಿಂದಿರುವ ಮೂಲ ಪ್ರಚೋದನೆ.

ಈ ಅಂಶವನ್ನು ''ಅಭಿನವ ಭಾರತಿ'' ಹೀಗೆ ವಿವರಿಸುತ್ತದೆ. ''ಅಭಿವ್ಯಕ್ತಿ ಎನ್ನುವುದು ಒಂದು ಮನಸ್ಥಿತಿ, ರಸಾನುಭವದ ಮನಸ್ಥಿತಿ. ರಸವೆನ್ನುವುದು ಯಾವುದೇ ಒಂದು ಹೊಸ ಸೃಷ್ಟಿಯಲ್ಲ ಈಗಾಗಲೇ ಸಾಮಾಜಿಕನ ಮನಸ್ಸಿನಲ್ಲಿರುವುದೇ ಮುಕ್ತವಾಗಿ ಆನಂದಕರವಾಗಿ ವ್ಯಕ್ತವಾಗುವುದೇ ಅಭಿವ್ಯಕ್ತಿ''. ಈ ಅಭಿವ್ಯಕ್ತಿಗೆ ಪದಗಳು ಅವುಗಳ ಅರ್ಥಗಳು ನಿಮಿತ್ತವಾಗಿರುತ್ತದೆ. ಕಾವ್ಯ ಕ್ರಿಯೆ ಎನ್ನುವುದು ಅಭಿವ್ಯಕ್ತಿಯ ಪ್ರಕ್ರಿಯೆಯೇ ಆಗಿದೆ. ಧಾರ್ಮಿಕ ಪರಿಭಾಷೆಯಲ್ಲಿ ಭಕ್ತನಿಗೆ ದೈವಿಕ ಅನುಭವವಾಗಲು ಗುರು ನಿಮಿತ್ತವಾಗುವಂತೆ ಕಾವ್ಯ ಕ್ರಿಯೆಯಲ್ಲಿ ಓದುಗನಿಗೆ ಕೃತಿಯ ಮುಖಾಂತರ ಕವಿ ನೆರವಾಗುತ್ತಾನೆ.

## ವಾಗ್ರಚನೆಯ ಸ್ವರೂಪ:

ಮನುಷ್ಯನ ಪ್ರಜ್ಞೆಗೆ ವಿವಿಧಸ್ತರಗಳು ಇರುವಂತೆಯೆ ಆಯಾ ಸ್ತರವನ್ನು ಅಭಿವ್ಯಕ್ತಿಸಲು ಭಾಷೆಯಲ್ಲಿಯೂ ವಿವಿಧ ಸ್ತರಗಳೂ ಇವೆ. ವಚನಕಾರರಲ್ಲಿ ಉಲಿ, ನುಡಿ,ಮಾತು, ಭಾಷೆ, ಶಬ್ದ, ವಚನ ಎಂಬ ಪರಿಕಲ್ಪನೆಗಳನ್ನು ಈ ವಿವಿಧ ಭಾಷಾಸ್ತರಗಳು ಸೂಚಿಸುವ ಪದಗಳೆಂದು ಪರಿಗಣಿಸಲು ಸಾಧ್ಯವಿದೆ. ಇವುಗಳ ಪರಸ್ಪರ ಸಂಬಂಧವನ್ನು ಹೀಗೆ ಸೂಚಿಸಬಹುದು .ನಿಃಶಬ್ದ→ ಉಲಿ → ನುಡಿ →ಶಬ್ದ→ ವಚನ→ ಭಾಷೆ → ನಿಃಶಬ್ದ. ಪ್ರಜ್ಞೆಯ ಆದಿಮ ಸ್ಥಿತಿಯಾದ ನಿಃಶಬ್ದದಲ್ಲಿ ಉಂಟಾಗುವ ಮೊದಲ ಹಂತದ ಸಂಚಲನೆಯನ್ನು ಉಲಿ ಎಂದು ಗುರುತಿಸಲಾಗಿದೆ.

೨೫. ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ? ಬೀಜದೊಳಗಣ
ವೃಕ್ಷ ಉಲಿಯ ಬಲ್ಲುದೆ ? ತೋರಲಿಲ್ಲಾಗಿ ಬೀರಲಿಲ್ಲಾರಿಗೆಯೂ
ಗುಹೇಶ್ವರ, ನಿಮ್ಮ ನಿಲವನನುಭವ ಸುಖ ಬಲ್ಲ.

(೨ ವ.ಸಂ.)

೨೬. ಉಲಿವ ಉಯ್ಯಾಲೆಯು ಹರಿದು ಬಂದಿರಲು, ತಾಗದೆ ತೂಗುವುದು
ಭವಸಾಗರ ಮರಳಿಬಾರದಂತೆ ಹಂಸೆಯು ಮೇಲೆ ತುಂಬಿ
-ಕುಳ್ಳಿರ್ದು ಸ್ವರ ಗೆಯ್ಯು ಘೋಷಿಪ . . . .

(೨೪೧)

೨೭. ಜಗದಗಲದಲ್ಲಿ ಹಬ್ಬಿದ ಬಳೆ ಯುಗಜುಗಕ್ಕೆ ತೆಗೆಯದು ನೋಡಾ । ಬಗೆಯದು,
ಭ್ರಮೆಗೊಳ್ಳದು । ತನ್ನಯ ಇರವಿನ ಪರಿಯಂತುಟಾಗಿ, ಜಗದ
ಪ್ರಾಣಿಗಳುಲಿದುಲಿದು ಮರಳಿ ಮತ್ತಲ್ಲಿಯೆ ಬೀಳಲು . . . (೩೬೭)

೨೮. ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೇ ? ಶರೀರ ಉಳ್ಳನಕ್ಕರ

ವಿಕಾರ ಮಾಬದೆ ? ಅಯ್ಯಾ; ಸುಳಿಹುಳ್ಳನ್ನಕ್ಕರ ಸೂತಕ ಹಿಂಗುವುದೆ

ಗುಹೇಶ್ವರ ?

(೪೮೭)

೨೯. ಉಲಿವ ಮರದ ಪಕ್ಷಿಯಂತೆ ದೆಸೆದೆಸೆಯ ನಾಲಿಸುತ್ತಿದ್ದೆ.

ಅರಿವರಿಲ್ಲ, ಅರಿವರಿಲ್ಲ, ಅರಿದು ಮರೆಯುತ್ತಯ್ಯ । ಮಡುವಿನೊಳಗೆ

ಬಿದ್ದ ಆಲಿಕಲ್ಲಿನಂತೆ ತಳಸಿದ್ದನು ಗುಹೇಶ್ವರಯ್ಯನು

(೬೬೬)

೩೦. ಪರಿಣಾಮ ಪರಿಮಿತ ದೊರಕೊಂಡಾತಂಗೆ . . .

ಬರಿಯ ಸಂಭ್ರಮಗಳೊಡತಣದನುಭಾವ ಐವತ್ತೆರಡಕ್ಷರ ತಮ್ಮಲ್ಲಿ

ತಾವು ಉಲಿದಂತೆ ಉಲಿದವು

(೬೪೫)

ಇಲ್ಲಿ ಉದಾಹರಿಸಿರುವ ಮೂರು ಭಾಗಗಳ ಉಲಿ ಎಂಬುದು ಯಾವುದೇ ಜೀವಿಯೊಂದರ ಅಸ್ತಿತ್ವದ ಸಂಕೇತವಾಗಿರುವಂತೆ ಕಾಣುತ್ತದೆ. ಇಂಥ ಉಲಿಯುವಿಕೆಯಿಂದ ಮಾತ್ರ ಜೀವಿಯೊಂದರ ಇರುವಿಕೆಯ ಅರಿವು ಮೂಡುತ್ತದೆ.

ನುಡಿ ಉಲಿಯುವಿಕೆಗಿಂತ ಸ್ವಲ್ಪ ಮೇಲಿನ ಹಂತದ್ದಾಗಿ ತೋರುತ್ತದೆ. ನುಡಿಯ ಹಿಂದೆ ಅನುಭವ ಮತ್ತು ತಿಳುವಳಿಕೆಗಳು ಕೆಲಸ ಮಾಡುತ್ತವೆ, ನುಡಿಗೆ ಒಂದು ಉದ್ದೇಶವೂ ಇರುತ್ತದೆ, ಆ ಉದ್ದೇಶ ಅನುಭವವನ್ನು ಹಂಚಿಕೊಳ್ಳುವುದು, ನಿವೇದಿಸುವುದು ಮತ್ತು ಇನ್ನೊಂದು ಜೀವಿಯನ್ನು ಪ್ರಭಾವಗೊಳಿಸುವುದು ಆಗಿರುತ್ತದೆ. ಬಸವಣ್ಣನ ಪ್ರಸಿದ್ಧವಾದ ವಚನವೊಂದು ನುಡಿಯ ಸ್ವರೂಪವನ್ನು ಸೂಚಿಸುತ್ತದೆ.

೩೦. ನುಡಿದರೆ ಮುತ್ತಿನ ಹಾರದಂತಿರಬೇಕು

ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು

ನುಡಿದಡೆ ಸ್ಪಟಿಕದ ಶಲಾಕೆಯಂತಿರಬೇಕು

ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು

ನುಡಿಯೊಳಗಾಗಿ ನಡೆಯದಿದ್ದಡೆ

ಕೂಡಲ ಸಂಗಮದೇವನೆಂತೊಲಿವನಯ್ಯಾ ? (೮೦೩)

ಈ ವಚನದಲ್ಲಿ ನುಡಿಯ ಪರಸ್ಪರ ಮೂರು ಸಂಬಂಧಿ ಲಕ್ಷಣ ಹೇಳಲಾಗಿದೆ. ನುಡಿಯು ಮುತ್ತಿನ ಹಾರದ ಪರಿಷ್ಕೃತ ಸೌಂದರ್ಯ, ಬಾಹ್ಯ ಹೊಳಪನ್ನು ಮಾತ್ರವಲ್ಲದೆ ಮಾಣಿಕ್ಯದಂತೆ ಅಂತರಂಗದ ದೀಪ್ತಿಯನ್ನು ಹೊಂದಿರಬೇಕು. ಇವೆರಡಕ್ಕಿಂತ ಮುಖ್ಯವಾದ ಮೂರನೆ ಲಕ್ಷಣವೆಂದರೆ ಒಳ -ಹೊರಗುಗಳಲ್ಲಿ ಭಿನ್ನತೆ ಇಲ್ಲದ ಪಾರದರ್ಶಕವಾದ ಸ್ಪಟಿಕದ ರೂಪದಲ್ಲಿ ಹೇಳುವುದು ಸಾಧ್ಯವಾಗಬೇಕು.

ಅಕ್ಕಮಹಾದೇವಿ ಅಲ್ಲಮನಂತೆಯೇ ನಿಃಶಬ್ದವನ್ನು ಮೆಚ್ಚುವವಳು. ತನ್ನ ಅನುಭಾವ ಸ್ಥಿತಿಯನ್ನುಅವಳು ''ನುಡಿಯ ಗಡಣವ ಮರೆದು ತೆರಹಿಲ್ಲದಿದ್ದೆನು'' ( ೨-ಅಕ್ಕ ) ಎಂದು ವಿವರಿಸುತ್ತಾಳೆ ಹಾಗೂ ನುಡಿಯಲೇಬೇಕಾದರೆ ನುಡಿಗೆ ತಕ್ಕ ಸಹೃದಯರ ಬಳಗವೊಂದು ಬೇಕೆಂದು ಬಯಸುತ್ತಾಳೆ. ''ಆಡುವುದು, ಹಾಡುವುದು, ಹೇಳುವುದು, ಕೇಳುವುದು, ನಡೆಯುವುದು, ನುಡಿವುದು ಸರಸ ಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ '' (೪೫- ಅಕ್ಕ ).

ನುಡಿಯನ್ನು ಕುರಿತಂತೆ ಅಲ್ಲಮನ ಒಂದು ವಚನ ಭಾಗ ವಿಶೇಷವಾಗಿ ಗಮನ ಸೆಳೆಯುತ್ತದೆ. 'ನುಡಿವಡೆ ನುಡಿಗೆಟ್ಟು ನುಡಿಯ ನುಡಿಯಬೇಕು'' ಎಂದು ಅವನು ಹೇಳುತ್ತಾನೆ. ಇದು ನಿಜವಾದ ಕವಿಯೊಬ್ಬ ಭಾಷೆಯನ್ನು ಹೇಗೆ ಬಳಸಬೇಕೆಂಬ ಸೂಚನೆಯನ್ನು ಒಳಗೊಂಡಿರುವ ಸೂತ್ರದಂತಿದೆ. ಕವಿಯು ಬಳಸುವ ಭಾಷೆ ಸಾರ್ವಜನಿಕವಾದದ್ದು. ಅತಿ ಬಳಕೆಯಿಂದ ಅದರ ಅರ್ಥಸೂಚನೆಯ ಸಾಮರ್ಥ್ಯ ಮೊಂಡಾಗಿರುತ್ತದೆ. ಹಾಗಿರುವಾಗ ಪರಿಚಿತವಾದದ್ದನ್ನು ಅಪರಿಚಿತಗೊಳಿಸಿ ಆ ಮುಖಾಂತರ ಹೊಸ ನೋಟವನ್ನು ಓದುಗರಿಗೆ ನೀಡಲು ಸಾಧ್ಯವಾಗಬೇಕಾದರೆ ಕವಿ ಪರಿಚಿತ ನುಡಿಯನ್ನು ಕೆಡಿಸಿಯೇ

ಮಿತಿಯುಬೇಕು. ಇದು ಆಧುನಿಕ ಚಿಂತಕರು ಕಾವ್ಯ ಭಾಷೆಯು ಸಾಮಾನ್ಯ ಭಾಷೆಯಿಂದ deviate ಆಗುತ್ತದೆ ಎಂದು ಹೇಳುವ ಸೂತ್ರದಂತೆಯೇ ಇದೆ ಎಂಬುದನ್ನು ಗಮನಿಸಬಹುದು. ಈ ಸೂತ್ರವು ಸ್ವತಃ ಅಲ್ಲಮನ ವಚನಗಳಿಗೇ ಹೆಚ್ಚು ಹೊಂದುವಂತಿದೆ. ಎಲ್ಲ ವಚನಕಾರರಲ್ಲಿ ಅಲ್ಲಮ ಮಾತ್ರ ಭಾಷೆಯನ್ನು ಮಿತಿಗೆಟ್ಟ ಮಿತಿಯಾಗಿ ಬಳಸುವುದರಲ್ಲಿ ಎತ್ತಿದ ಕೈಯಾಗಿದ್ದಾನೆ. ಅಕ್ಕಮಹಾದೇವಿ 'ಗಂಡ' ಎಂಬ ಲೌಕಿಕ ಪರಿಚಿತ ಕಲ್ಪನೆಯನ್ನು 'ಕೆಡಿಸಿ' ಹೊಸ ಅರ್ಥದಲ್ಲಿ ಬಳಸಿರುವುದು ಇನ್ನೊಂದು ಉದಾಹರಣೆ. ಆಧುನಿಕ ಕವಿತೆಗಳಲ್ಲೂ ಯಶಸ್ವಿಯಾದ ಭಾಗಗಳಲ್ಲಿ ಈ ಬಗೆಯ ಮಿತಿಯ 'ಕೆಡಿಸುವಿಕೆ' ಎದ್ದು ಕಾಣುತ್ತದೆ. ಕನ್ನಡದ ಅತ್ಯುತ್ತಮ ನವ್ಯ ಕವಿತೆಗಳಲ್ಲಿ ಈ ಮಾತಿಗೆ ಹೇರಳ ಉದಾಹರಣೆಗಳು ಕಾಣಸಿಗುತ್ತವೆ. ''ಮಿತಿಗೆಟ್ಟ ಮಿತಿ'' ಎಂಬುದನ್ನು ಹೀಗೆ ಕಾವ್ಯಭಾಷೆಯ ಒಂದು ಸೂತ್ರ ಎಂದು ಪರಿಗಣಿಸಬಹುದು.

ಶಬ್ದ ಎಂಬುದನ್ನು ಅಲ್ಲಮನ ವಚನಗಳಲ್ಲಿ ಪ್ರಮುಖವಾಗಿ ಪರಿಕಲ್ಪನೆ ಎಂಬರ್ಥದಲ್ಲಿ ಬಳಸಲಾಗಿದೆ. ಪರಿಕಲ್ಪನೆಗಳು ಸತ್ಯವಲ್ಲ, ಸತ್ಯವನ್ನು ಸೂಚಿಸಲು ಮನುಷ್ಯನ ಮನಸ್ಸು ರೂಪಿಸಿಕೊಂಡ ಭಾಷಿಕ ಕಲ್ಪನೆಗಳು ಎಂಬುದು ಅಲ್ಲಮನ ನಿಲುವಾಗಿರುವಂತೆ ತೋರುತ್ತದೆ. ಆದ್ದರಿಂದಲೇ 'ಶಬ್ದ ಸ್ವರವಾಗಿವಲ್ಲ' ( ೨೬೯) ಶಬ್ದದ ಲಜ್ಜೆಯು ಮೋಹ (೨೯೪ ), 'ಹಂಗಿನ ಶಬ್ದ' (೬೦೮) ಎಂದು ಮುಂತಾಗಿ ಶಬ್ದದ ಮಿತಿಯನ್ನು ಅಲ್ಲಮ ಹೇಳುತ್ತಾನೆ. ಶಬ್ದವನ್ನು ದಾಟಿ ಅಂದರೆ ಪರಿಕಲ್ಪನೆಯ ಆಚೆಗೆ ಇರುವ ಅನುಭವವನ್ನು ಪಡೆಯಬೇಕೆಂಬುದು ಅವನ ಗುರಿ. ಶಬ್ದವಲ್ಲೇ ತಮ್ಮನ್ನು ತಾವು

ಚಿಂತನೆಗಳನ್ನು ಆಧರಿಸಿ ಸತ್ಕಾವ್ಯ ಮತ್ತು ಸಾಮಾನ್ಯ ಕಾವ್ಯ (GOOD AND BAD POETRY) ಗಳ ವ್ಯತ್ಯಾಸವನ್ನು ರೂಪಿಸಿ ಕೊಳ್ಳಲು ಸಾಧ್ಯವಿದೆ.

ಅಲ್ಲಿ- ಮತಿಗಳಿಗೆ ಇಲ್ಲದ ಪರಂಪರೆಯನ್ನು ಸೃಷ್ಟಿಸುವ ಗುಣ ವಚನ ರಚನೆಗೆ ಇದೆ. 'ಆದ್ಯರ ವಚನ ಪರುಷ ಕಂಡಯ್ಯ' ಎಂಬ ಬಸವಣ್ಣನ ಮಾತು ಇಂಥ ವಚನ ಪರಂಪರೆಯನ್ನುಕುರಿತದ್ದು ; ಆದ್ಯರ ವಚನಗಳನ್ನು

೩೨. 'ಹಾಲತೊರೆಗೆ ಬೆಲ್ಲದ ಕೆಸರು
ಸಕ್ಕರೆಯ ಮಳಲು ತವರಾಜರ ನೊರೆ ತೆರೆ ' (೧-ಪೀಠಿಕೆ - ೮ )

ಎಂದು ಬಸವಣ್ಣ ಬಣ್ಣಿಸುವಾಗ ವಚನ ಪರಂಪರೆಗೆ ಅವನು ನೀಡಿದ ಮಹತ್ವವನ್ನು ತನ್ನ ವಚನಗಳು ಸಾಧಿಸಬೇಕಾದ ಆದರ್ಶವನ್ನು ವಿವರಿಸುವಂತೆ ತೋರುತ್ತದೆ. ಈ ಮಾತುಗಳನ್ನು ಸಮಕಾಲೀನ ಕವಿಯೊಬ್ಬ ತನಗಿಂತ ಹಿಂದಿನ ಕಾವ್ಯ ಪರಂಪರೆಯ ಬಗ್ಗೆ ಇಟ್ಟುಕೊಳ್ಳುವ ಗೌರವ ಮತ್ತು ಆತಂಕ ಎಂದು ವಿವರಿಸಬಹುದು. ತನ್ನ ಹೊಸ ವಚನವು ಆದ್ಯರ ವಚನದೊಂದಿಗೆ ಹೋಲಿಸಿದಾಗ ಉಪ್ಪು ನೀರು ಆದೀತು ಎಂಬ ಆತಂಕವೂ ಬಸವಣ್ಣನಿಗೆ ಇದೆ.

೩೩. 'ಕೂಡಲ ಸಂಗನ ಶರಣರ ವಚನದಲ್ಲಿ
ಲೇಸೆನಿಸಿ ಕೊಂಡು ಒಂದೇ ದಿನ ಬದುಕಿದರೆ ಸಾಕು' (೧೦೧- ೮ ) ಎಂದು

ಬಸವಣ್ಣ ಹೇಳುವಾಗ ಕವಿಯೊಬ್ಬನಿಗಿರುವ ತಾನು ಮುಂದಿನ ಕಾಲದ ಪಠ್ಯಗಳ ಅವಿಭಾಜ್ಯ ಅಂಗವಾಗಬೇಕೆಂಬ ಆಕಾಂಕ್ಷೆಯನ್ನು ಸೂಚಿಸುತ್ತದೆ.

ಭಾಷೆ ಎಂಬುದನ್ನು ಅರ್ಥ ವ್ಯವಸ್ಥೆ ಎಂದು ನಾವು ಪರಿಗಣಿಸುತ್ತೇವೆ. ಅರ್ಥ ಎಂಬುದು ಏನಿದ್ದರೂ ಈ ಭಾಷಾ ವ್ಯವಸ್ಥೆಯೊಳಗಿರುವಂಥದ್ದು ಆದರೆ ವಚನಕಾರರು ವ್ಯಕ್ತಪಡಿಸುವ, ಬಯಸುವ ಅನುಭಾವ ಭಾಷೆ ಆಚೆಗಿನದು. ಶರಣರು ಸಾಮಾಜಿಕ ವ್ಯವಸ್ಥೆ ವಿರುದ್ಧ ಪ್ರತಿಭಟಿಸಿದಂತೆಯೇ ಭಾಷಾ ವ್ಯವಸ್ಥೆಯ ಬಗೆಗೂ ತಮ್ಮ ಪ್ರತಿಭಟನೆ ದಾಖಲಿಸಿದ್ದಾರೆ. ಭಾಷೆಯ ವಿವಿಧ ಅಂಶಗಳ ವೈರುಧ್ಯವನ್ನು ಆಧರಿಸಿ ಅರ್ಥವು ಹುಟ್ಟುತ್ತದೆ. ಆದರೆ ಶರಣರು ವಿರೋಧಗಳಿಲ್ಲದ ಅನುಭವವನ್ನು

ಕಳೆದು ಕೊಳ್ಳುವವರ ಬಗ್ಗೆ ಅವನಿಗೆ ಅಗಾಧವಾದ ತಿರಸ್ಕಾರವಿದೆ. 'ಶಬ್ದ ಸಂಭ್ರಮದ ಮದ' (೬೧೨) ಶಬ್ದ ಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು ಎಂದಲ್ಲ ಟೀಕಿಸುತ್ತಾನೆ. ಹಾಗೆಯೆ ಶಬ್ದವೆಂಬುದು ಅನುಭವದ ಅಭಿವ್ಯಕ್ತಿಗೆ ಅನಿವಾರ್ಯ ಎಂಬ ಅರಿವು ಅವನಿಗಿದೆ. 'ಶಬ್ದಕ್ಕೆ - ಸೂತಕವುಂಟೆ' (೧೧೯೮ ) ಶಬ್ದ ಪಿಸಾಲು ಎಂದೂ ಹೇಳುತ್ತಾನೆ. ಆದ್ದರಿಂದಲೇ ಅನುಭವ ಪ್ರಾಮಾಣ್ಯವಿರುವ ವ್ಯಕ್ತಿ ಬಳಸುವ ಶಬ್ದ ನಿಃಶಬ್ದವನ್ನೇ ಒಳಗೊಂಡಿರುತ್ತದೆ ಎಂಬುದವನ ನಿಲುವು. ಕುರ್ತಕೋಟಿಯವರು ಅಲ್ಲಮನ ಅಭಿವ್ಯಕ್ತಿ ವಿಧಾನ ಕುರಿತು ಅಲ್ಲಮನಲ್ಲಿ ಶಬ್ದವು ಸ್ಥಿರ, ಅರ್ಥಸ್ಥಿರ ಎನ್ನುತ್ತಾರೆ (೧೬೩ ಪು. ಕ.ಸಾಹಿತ್ಯ ಸಂಗಾತಿ ) ಉತ್ತಮವಾದ ಎಲ್ಲ ಕಾವ್ಯದಲ್ಲೂ ಈ ಬಗೆಯ ಅಸ್ಥಿರವಾದ ಅಥವಾ ಪರಿಮಿತಿಯನ್ನು ನಿರಾಕರಿಸುವ ಅರ್ಥ ಇದ್ದೇ ಇದೆ.

ವಚನ ಎಂಬುದಕ್ಕೆ ಮಾತಿಗೆ ಅಲ್ಲಮ - ಬಸವ ಮುಂತಾದವರು ನಿರ್ಮಿಸಿದ ಹೊಸ ಪ್ರಕಾರದ ಹೆಸರು, ಮನುಷ್ಯ ತನ್ನ ದೈವಕ್ಕೆ ಅಥವಾ ಸುತ್ತಲ ಸಮಾಜಕ್ಕೆ ಬದ್ಧನಾಗುವ ಪ್ರಮಾಣ, ಹೇಳುವುದು ಎಂಬ ಮೂರು ಮುಖ್ಯ ಅರ್ಥಗಳಿವೆ. ಕಾವ್ಯಮೀಮಾಂಸೆಯ ದೃಷ್ಟಿಯಿಂದ ಈ ಮೂರು ಅರ್ಥಗಳ ಸಂಯೋಜನೆ ಮತ್ತು ವಚನ ಎಂಬ ಪರಿಕಲ್ಪನೆ ಬಗ್ಗೆ ವಚನಕಾರರಲ್ಲೇ ಹುಟ್ಟಿದ ವ್ಯಾಖ್ಯಾನಗಳು ಗಮನ ಸೆಳೆಯುತ್ತವೆ.

ವಚನ ಎಂಬುದು ಮುಖ್ಯವಾಗಿ ಒಂದು ರಚನೆ. ಈ ರಚನೆಗೆ ಅನುಭವದ ಪ್ರಾಮಾಣ್ಯ ಬೇಕು. ವಚನ ಹುಟ್ಟುವುದೇ ಇನ್ನೊಬ್ಬ ವ್ಯಕ್ತಿಯ, ಸಮಾಜದ ದೈವದ ಸನ್ನಿಧಿಯಲ್ಲಿ. 'ತನ್ನ ವಚನ ತನಗೆ ಹಗೆಯಾದಡೆ ಅದೇ ಪ್ರಳಯವಲ್ಲ' (೬೪೪- ಅಲ್ಲಮ) ಎಂಬ ಮಾತು ವಚನಕ್ಕೂ ಅನುಭವ ಸತ್ಯಕ್ಕೂ ಬಿರುಕುಂಟಾದಾಗ ಎದುರಿಸ ಬೇಕಾದ ಅನಾಹುತವನ್ನು ಸೂಚಿಸುತ್ತದೆ. 'ಅರಿವುವಿಡಿದು ವಚನವಿದೆ, ವಚನ ವಿಡಿದು ತೋರುವ ವಚನವಿದೆ' (೧೦೪೧- ಅಲ್ಲಮ) ಎಂಬ ಮಾತು ಮನುಷ್ಯನ ತಿಳುವಳಿಕೆಗೂ ವಚನಕ್ಕೂ ಇರುವ ಸಂಬಂಧ ಸೂಚಿಸುತ್ತದೆ. ಹೀಗಾಗಿ ಸುಳ್ಳು ವಚನಕಾರರನ್ನು ಧಿಕ್ಕರಿಸುತ್ತಾರೆ. 'ವಚನ ರಚನೆಯೆಂಬ ಮಾತಿನ ಬಣ್ಣದ ಪರಿಯಲ್ಲಿ ನೋಡಾ' (೯೭೬- ಅಲ್ಲಮ ) 'ವಚನದ ರಚನೆಯ ರಂಜನೆಯುಲಿಲೆಯ ಪಾಡುವರು ಎಂದು' (೪೯೭) ಇಂಥ ಸುಳ್ಳು ವಚನಗಳನ್ನು ತಿರಸ್ಕರಿಸುತ್ತಾರೆ. ಈ

ವ್ಯಕ್ತಪಡಿಸಲು ಬಯಸುವವರು. ಹೀಗಾಗಿ ಭಾಷಾ ವ್ಯವಸ್ಥೆಯ ಬಗೆಗೆ ತಾತ್ತ್ವಿಕ ತಿರಸ್ಕಾರ ಮತ್ತು ವಿರೋಧಗಳು ವ್ಯಕ್ತಪಟ್ಟಿವೆ. ತಪಸ್ಸು, ವ್ರತ, ನೇಮ ಇತ್ಯಾದಿಗಳು ಪ್ರತ್ಯೇಕ ವ್ಯವಸ್ಥೆಗಳಾಗಿ ಮನುಷ್ಯನ ಮೇಲೆ ದಬ್ಬಾಳಿಕೆ ನಡೆಸುವಂತೆಯೇ ಭಾಷೆಯು ಅಖಂಡ ನಿರಾಕಾರ ಅನುಭವವನ್ನು ಅರ್ಥಕ್ಕೆ ಮಿತಿ ಪಡಿಸಲು ಬಯಸುತ್ತದೆ. ಆದ್ದರಿಂದಲೇ ಅಲ್ಲಮನು 'ತಪವೆಂಬುದು ತಗಹು ... ಭಾಷೆಯೆಂಬುದು ಪ್ರಾಣ ಘಾತಕ' (೬೨೩ ಅಲ್ಲಮ) 'ಆಯುಷ್ಯ ಹಿರಿದು ಭಾಷೆ ಕಿರಿದು'(೮೬೯ ಅಲ್ಲಮ) ಎನ್ನುತ್ತಾನೆ. ಅಕ್ಕಮಹಾದೇವಿಯು 'ಚೆನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ' ಎನ್ನುತ್ತಾಳೆ. ಎಲ್ಲ ಪ್ರಮುಖ ವಚನಕಾರರು ಮತ್ತು ಅನುಭಾವಿಗಳು ತಮ್ಮ ಎಲ್ಲ ಕ್ರಿಯೆ ಮತ್ತು ಅಭಿವ್ಯಕ್ತಿಗಳು 'ಪರಿಣಾಮಕಾರಿಯಾಗಬೇಕು' ಎಂದು ಬಯಸುತ್ತಾರೆ. ಎಲ್ಲ ಬಗೆಯ ಚೆಲುವುಗಳಲ್ಲಿ ಮನದ ಪರಿಣಾಮವೇ ಚೆಲುವು ಎಂದು ಅಕ್ಕ ಹೇಳುತ್ತಾಳೆ. ಈ ಪರಿಣಾಮವಾದರೋ ನಿಃಶಬ್ದ ಸ್ವರೂಪಿಯಾದದ್ದು. ಆದ್ದರಿಂದಲೇ 'ಶಿಶು ಕಂಡ ಕನಸು' 'ಶಬ್ದ ಮುಗ್ಧ' 'ಮನದಲ್ಲಿ ಪರಿಣಾಮವಹುದು ಇನ್ನೆಂದೋ' ಎಂಬಂಥ ಮಾತುಗಳು ಮತ್ತೆ ಮತ್ತೆ ಎದುರಾಗುತ್ತದೆ. ಅವ್ಯಕ್ತವಾದದ್ದು ವ್ಯಕ್ತವಾಗಿ, ಕೇವಲ ಉಲಿಯಾಗಿದ್ದದ್ದು, ಅರ್ಥವುಳ್ಳ ನುಡಿಯಾಗಿ ಪರಿಕಲ್ಪನೆಯಾಗಿ ಹಿಂದಿನ ಮತ್ತು ಮುಂದಿನ ಕಾಲದೊಂದಿಗೆ ಸಂಬಂಧವುಳ್ಳ ವಚನ ರಚನೆಯಾಗಿ ಅದರ ಮನದ ಮೇಲೆ ಉಂಟು ಮಾಡುವ ಪರಿಣಾಮ ಮತ್ತೆ ನಿಃಶಬ್ದವಾಗುವ ಕ್ರಮವನ್ನು ವಚನಕಾರರು ಚಿಂತಿಸಿದ್ದಾರೆ. ಇದು ಅವರ ಕಾವ್ಯಮೀಮಾಂಸೆಯ ಮುಖ್ಯ ಭಾಗವಾಗಿದೆ.

ಉಲ್ಲೇಖಗಳು


೧. ಕೀರ್ತಿನಾಥ ಕುರ್ತಕೋಟಿ : ಕನ್ನಡ ಸಾಹಿತ್ಯ ಸಂಗಾತಿ

೨. ಬಸವರಾಜು ಎಲ್. (ಸಂ): ಅಲ್ಲಮನ ವಚನ ಚಂದ್ರಿಕೆ

೩. ವಿಜಯಕುಮಾರ್ ಹ.ನಂ. : ಅಲ್ಲಮನ ವಚನ ಪ್ರಕೋಶ

೪. ಕಲ್ಬುರ್ಗಿ ಎಂ.ಎಂ. ೧: ಬಸವಣ್ಣನವರ ವಚನ ಸಂಪುಟ

೨: ಶಿವಶರಣೆಯರ ವಚನ ಸಂಪುಟ

೩. ಅಲ್ಲಮನ ವಚನ ಸಂಪುಟ

೫. ಶಿವರುದ್ರಪ್ಪ ಜಿ.ಎಸ್. :ವಚನಗಳಲ್ಲಿ ಕಾವ್ಯ ತತ್ತ್ವ

೬. ಬಸವರಾಜು ಎಲ್. : ಅಕ್ಕನ ವಚನಗಳು:

## ಸಮಾರೋಪ

ಈ ಶತಮಾನದ ಏಳನೆಯ ದಶಕದಿಂದ ಸಾಹಿತ್ಯವನ್ನು ಕುರಿತ ಚಿಂತನೆಗಳು ಅನ್ವಯಿಕ ಮಾದರಿಯನ್ನು ಬಿಟ್ಟುಕೊಟ್ಟು ಸಾಹಿತ್ಯದ ಸ್ವರೂಪ, ಅದರಿಂದ ಓದುಗರ ಮೇಲೆ ಉಂಟಾಗುವ ಪರಿಣಾಮ ಮುಂತಾದ ತಾತ್ವಿಕ ಪ್ರಶ್ನೆಗಳ ಪರಿಶೀಲನೆಗೆ ಪ್ರಾಮುಖ್ಯ ನೀಡತೊಡಗಿದೆ. ಈ ಹಿನ್ನೆಲೆಯಲ್ಲಿ . ಸಾಹಿತ್ಯ ತತ್ವಗಳ ಪ್ರಶ್ನೆಯನ್ನು ಕನ್ನಡದ ವಚನ ಸಾಹಿತ್ಯದ ನೆಲೆಯಿಂದ ರೂಪಿಸಿಕೊಳ್ಳಲು ಅವಕಾಶವಿದೆ. ನಾವು ಇಂದು ಆಧುನಿಕ ಎಂದು ಭಾವಿಸುತ್ತಿರುವ ತಾತ್ವಿಕ ಚಿಂತನೆಗಳ ಬೀಜರೂಪವನ್ನು ೧೨ನೆಯ ಶತಮಾನದ ವಚನ ರಚನೆಗಳಲ್ಲಿ ಕಾಣಲು ಸಾಧ್ಯವಿದೆ. ಅಂಥ ಕೆಲವು ಸೂಚನೆಗಳನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಮೊದಲಿಗೆ ಇದುವರೆಗಿನ ಚರ್ಚೆಯಲ್ಲಿ ಗಮನಿಸಿದ ಮುಖ್ಯಾಂಶಗಳನ್ನು ಕ್ರೋಢೀಕರಿಸಲಾಗಿದೆ.

೧. ಹನ್ನೆರಡನೆಯ ಶತಮಾನದಲ್ಲಿ ಮೊದಲಬಾರಿಗೆ ಎಂಬಂತೆ ಮನುಷ್ಯ ಸಾಮಾನ್ಯ ಅನುಭವಗಳಿಗಿಂತ ವ್ಯಕ್ತಿ ವಿಶಿಷ್ಟಅನುಭವಗಳಿಗೆ ಪ್ರಾಮುಖ್ಯ ಸಂದಿದೆ.

೨. ಈ ವ್ಯಕ್ತಿತ್ವ ಕಲ್ಪನೆ ವಚನದ ಭಾಷಾಸ್ವರೂಪವನ್ನು ಪ್ರಭಾವಿಸಿತು. ಕಥೆಯ ನಿರೂಪಣೆಯ ಮಾಧ್ಯಮವಾಗಿದ್ದ ಭಾಷೆ ಅಂತರಂಗ ಪರಿವೀಕ್ಷಣೆಯ ಸಾಧನವಾಯಿತು.

೩. ವಚನಗಳ ವೈಚಾರಿಕತೆ ಪರೋಕ್ಷವಾಗಿ ಕಾವ್ಯಚಿಂತನೆಯ ಮೇಲೆ ಪ್ರಭಾವ ಬೀರಿತು.

೪. ವ್ಯಕ್ತ ಮತ್ತು ಅವ್ಯಕ್ತಗಳ ಐಕ್ಯತೆಯನ್ನು ಒಪ್ಪುವ ಶಕ್ತಿವಿಶಿಷ್ಟಾದ್ವೈತದ ನಿಲುವು ವಚನರಚನೆಯನ್ನೂ ವಚನ ಕಾರರ ಭಾಷಿಕ ಧೋರಣೆಗಳನ್ನೂ ಪ್ರಭಾವಿಸಿದೆ.

೫. ''ಸಾಹಿತ್ಯ'' ಎಂಬ ಮಾತನ್ನು ವಚನಕಾರರು ನಾವು ಇಂದು ಬಳಸುವ ಅರ್ಥದಲ್ಲಿ ಬಳಸಿಲ್ಲ. ಕಾವ್ಯ . ಎಂಬುದರ ಬಗಗೂ ಅಂಥ ಮೆಚ್ಚುಗೆ ಅವರಲ್ಲಿ ಕಾಣುವುದಿಲ್ಲ.

೬. ಸ್ವಂತ ಅನುಭವದಿಂದ ಪಡೆದ ಅರಿವು ಮಾತ್ರ ಮಹತ್ವದ್ದೆಂದು ನಂಬುವ ವಚನಕಾರರಿಗೆ ವೇದ, ಶಾಸ್ತ್ರ, ಪುರಾಣ, ತರ್ಕ ಮುಂತಾದ ಕೇವಲ ತಿಳಿವಳಿಕೆಯೇ ಗುರಿಯಾಗಿರುವ ರಚನೆಗಳ ಬಗ್ಗೆ ತಿರಸ್ಕಾರವಿದೆ.

೭. ವಚನಗಳು ಮಾತಿಗೆ ಒಗ್ಗಲು ನಿರಾಕರಿಸುವ 'ಅನುಭವ'ಕ್ಕೆ ಪ್ರಾಮುಖ್ಯ ನೀಡುವುದರಿಂದ ಅದಕ್ಕೆ ತಕ್ಕ ವಾಗ್ರಚನೆಯನ್ನು ವಚನಕಾರರು ತಾವೇ ರೂಪಿಸಿಕೊಳ್ಳಬೇಕಾಯಿತು. ಇದು ಎಲ್ಲ ನಿಜವಾದ ಕವಿಗಳ ಸಮಸ್ಯೆಯೂ ಹೌದು.

೮. ''ಆನು ಒಲಿದಂತೆ ಹಾಡುವೆ'' ಎಂಬ ಮಾತು ಕಾವ್ಯ ತತ್ವವೂ ಹೌದು ಸಿದ್ಧ ಪರಂಪರೆಯ ಮಾದರಿಗಳ ನಿರಾಕರಣೆಯೂ ಹೌದು.

೯. ಪರಂಪರೆಯ ಬಗ್ಗೆ ವಚನಗಳು ತಾಳಿರುವ ಧೋರಣೆಯ ಮುಖ್ಯಾಂಶಗಳೆಂದರೆ--ಹಿಂದಿನ ಅರಿವು ಮುಖ್ಯ, ಆದರೆ ಈಗ ಇರುವ ಕಾಲ ಹಿಂದಿನ ಕಾಲವನ್ನೂ ಮುಂದಿನ ಕಾಲವನ್ನೂ ಒಳಗೊಂಡಿದೆ; ಹಿಂದಿನ ಕಾಲ ಕೂಡ ಆಯ್ಕೆಗೆ ಸಂಬಂಧಿಸಿದ್ದು; ಪುರಾಣ ಇತ್ಯಾದಿಗಳನ್ನು ನಿರಾಕರಿಸಿ ಸ್ವಂತ ಅನುಭವವನ್ನು ಮುಖ್ಯವಾಗಿ ಭಕ್ತರ ಜೀವನ ಚರಿತ್ರೆಗಳನ್ನು ಆನುಷಂಗಿಕವಾಗಿ ಬಳಸಿಕೊಂಡು ಹೊಸ ಪರಂಪರೆಯ ಸೃಷ್ಟಿ; ಇಂದಿನ ನಿಜವಾದ ಹೊಸ ರಚನೆಯಿಂದ ಹಿಂದಿನ ಕವಿಗಳು ಮತ್ತು ಮುಂದಿನ ಕವಿಗಳ ಮಹತ್ವ ಭಿನ್ನವಾಗಿ ಕಾಣತೊಡಗುತ್ತದೆ.

೧೦. ನಿರಾಕಾರಕ್ಕೆ ಆಕಾರ ಕೊಡುವುದು ಕವಿಯ ಕಾರ್ಯ, ನಿರಾಕಾರವನ್ನು ಓದಿನ ಮುಖಾಂತರ ಆಕಾರಗೊಳಿಸಿಕೊಳ್ಳುವುದು ಓದುಗನ ಕಾರ್ಯ.

೧೧. ಗುರು-ಶಿಷ್ಯ-ಲಿಂಗ ಹೇಗೆ ಭಿನ್ನ ಅಲ್ಲವೋ ಹಾಗೆಯೇ ಕವಿ-ಕೃತಿ-ಓದುಗರು ಭಿನ್ನರಲ್ಲ, ಒಂದೇ ಪ್ರಕ್ರಿಯೆಯ ಭಿನ್ನ ಅಂಶಗಳು.

೧೨. ಅವ್ಯಕ್ತ ಎಂಬುದಕ್ಕಿಂತ ಭಿನ್ನವಾಗಿ ಅಭಿವ್ಯಕ್ತ ಎಂಬುದಿರಲು ಸಾಧ್ಯವಿಲ್ಲ. ಅಭಿವ್ಯಕ್ತಿಯು ಅವ್ಯಕ್ತವನ್ನು ಹಿಡಿದಿಡುವ ಪ್ರಯತ್ನವೇ ಆಗಿರುತ್ತದೆ.

೧೩. ನಿರೂಪ, ಅಥವ ಅನುಭವ ಕೇವಲ ಪದ ಅಥವ ಪರಿಕಲ್ಪನೆಯಲ್ಲ. ಅದನ್ನು ನಿಶ್ಶಬ್ದದಲ್ಲಿ ಗ್ರಹಿಸಬಹುದು ಅಷ್ಟೆ.

೧೪. ಶಬ್ದ-ನಿಶ್ಶಬ್ದಗಳ ಸಂಬಂಧ ವಚನಕಾರರ ಕಾವ್ಯ ಮೀಮಾಂಸೆಯ ಮುಖ್ಯ ಅಂಶ.

೧೫. ಅರ್ಥವಿಲ್ಲದ ಕೇವಲ ಇರುವಿಕೆಯನ್ನು ಭಾಷೆಯ ಮುಖಾಂತರ ಹಿಡಿದಿಡುವುದು ಹೇಗೆ ಎಂಬ ಪ್ರಶ್ನೆ ವಚನಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿತವಾಗಿದೆ. ಇದು ಎಲ್ಲ ಕಾಲದ ಕಾವ್ಯ ಮೀಮಾಂಸೆಯ ಮುಖ್ಯ ಪ್ರಶ್ನೆಯೂ ಆಗಿದೆ.

೦೬. ಎಲ್ಲ ಶ್ರೇಷ್ಠ ವಚನಕಾರರೂ ಶಬ್ದ-ನಿಶ್ಶಬ್ದ, ವ್ಯಕ್ತ-ಅವ್ಯಕ್ತ, ಸ್ಥೂಲ-ಸೂಕ್ಷ್ಮ ಎಂಬ ದ್ವಂದ್ವಗಳ ಮೊದಲನೆಯದಕ್ಕಿಂತ ಎರಡನೆಯದು ಮುಖ್ಯವೆಂದೂ ತಾವು ಸಾಧಿಸಬೇಕಾದ್ದೆಂದೂ ನಂಬಿದ್ದಾರೆ.

೦೭. ಶಬ್ದ-ನಿಶ್ಶಬ್ದಗಳ ಮೀಮಾಂಸೆಯನ್ನು ಭಾಷೆಯ ಸ್ತರದಿಂದ ಹಿಡಿದು ಕೆಲವು ಸಂಗತಿಗಳು ನಿಶ್ಶಬ್ದವಾಗಿಯೇ ಉಳಿದುಬಿಡುವಂತೆ ಮಾಡುವ ಸಾಮಾಜಿಕ ರಾಜಕೀಯ ಒತ್ತಡಗಳನ್ನು ಒಳಗೊಳ್ಳುವಂತೆ ಬೆಳೆಸುವುದು ಸಾಧ್ಯವಿದೆ.

೦೮. ಶಬ್ದಕ್ಕೆ ಮುನ್ನ ಮತ್ತು ಶಬ್ದದ ನಂತರ ಉಳಿಯುವ ನಿಶ್ಶಬ್ದ ವಚನಕಾರರ ಎಲ್ಲ ಚಿಂತನೆಗಳ ಮುಖ್ಯ ಅಂಶವಾಗಿದೆ.

೦೯. ನಿಶ್ಶಬ್ದ-ಶಬ್ದ-ನಿಶ್ಶಬ್ದ ಈ ಪ್ರಕ್ರಿಯೆಯಲ್ಲಿ ಹಲವು ಮಜಲುಗಳನ್ನು ವಚನಕಾರರು ಗುರುತಿಸಿದ್ದಾರೆ. ಅವುಗಳನ್ನು ಉಲಿ, ನುಡಿ, ಮಾತು, ಶಬ್ದ, ವಚನ, ಭಾಷೆ ಎಂದು ಗುರುತಿಸಬಹುದು.

೧೦. ಪ್ರಜ್ಞೆಯ ವಿವಿಧ ಸ್ತರಗಳಿಗೂ ಭಾಷೆಯ ರೂಪಗಳಿಗೂ ಇರುವ ಸಂಬಂಧವನ್ನು ವಚನಗಳ ಮುಖಾಂತರ ಕಟ್ಟಿಕೊಳ್ಳಲು ಸಾಧ್ಯವಿದೆ.

೧೦. ವಚನ ಎಂಬುದು ಅನುಭವ ಪ್ರಾಮಾಣ್ಯವನ್ನೂ ಸತ್ಯವನ್ನೂ ಆಧರಿಸಿದ್ದು. ಹಾಗಿಲ್ಲದ ಕೇವಲ ವಾಗ್ಜಾಲಗಳು ತಿರಸ್ಕಾರ ಯೋಗ್ಯ ಎಂಬ ನಿಲುವನ್ನು ಉತ್ತಮ ಮತ್ತು ಉತ್ತಮವಲ್ಲದ ಕಾವ್ಯಗಳ ವಿಂಗಡಣೆಯ ಮಾನದಂಡವಾಗಿ ಬಳಸಿಕೊಳ್ಳಬಹುದು.

೧೧. ಅನುಭವವೆಂಬುದು ಪರಿಕಲ್ಪನೆಯಲ್ಲ, ಅದರಾಚೆಗೆ ಇರುವಂಥದ್ದು, ವಚನ ಅದರ ಹೊಳಹನ್ನು ಕೇಳುಗ/ಓದುಗರಿಗೆ ನೀಡಿದಾಗಲೇ ಸಾರ್ಥಕ. ಇದು ಕೂಡ ಕಾವ್ಯದ ಮೌಲ್ಯಮಾಪನಕ್ಕೆ ಒಂದು ಆಧಾರವಾಗಬಹುದು.

೧೨. ವಚನಗಳೆ ಒಂದು ಪರಂಪರೆಯಾಗಿ ಬೆಳೆಯುವ ಸಾಧ್ಯತೆಯನ್ನು ವಚನಕಾರರೆ ಗುರುತಿಸಿದ್ದಾರೆ. ಆ ಪರಂಪರೆಯೊಳಗೆ ಪರಸ್ಪರ ಪ್ರಭಾವ ಉಂಟಾಗುವುದನ್ನು ಗಮನಿಸಿದ್ದಾರೆ. ಇದು ಇನ್ನೊಂದು ಅರ್ಥದಲ್ಲಿ ಕಾವ್ಯ ಪರಂಪರೆಯೊಂದು ನಿರ್ಮಾಣವಾಗುವ ಬಗೆಯನ್ನು ವಿವರಿಸುವಂತೆ ಇದೆ.

೨೪. ವಚನಗಳಿಂದ ಕವಿ, ಕೃತಿ, ಓದುಗ, ಅರ್ಥದ ಸ್ವರೂಪ, ಕೃತಿಯ ಉದ್ದೇಶ-- ಈ ಅಂಶಗಳ ಬಗೆಗೆ ಒಂದು ವೈಚಾರಿಕ ಆಕೃತಿಯನ್ನು ನಿರ್ಮಿಸಿಕೊಳ್ಳಲು ಸಾಧ್ಯವಿದೆ.

೨೫.ವಚನಕಾರರು 'ಕುರುಹು' ಎಂಬ ಪರಿಕಲ್ಪನೆಯ ಬಗ್ಗೆ ನಡೆಸಿರುವ ಚರ್ಚೆಗಳನ್ನು ಆಧಾರವಾಗಿಟ್ಟುಕೊಂಡು, ಅದರೊಡನೆ ಪಾಶ್ಚಾತ್ಯ ಸಿಮಿಯಾಟಿಕ್ಸ್ ತಿಳಿವಳಿಕೆಯನ್ನೂ ಸೇರಿಸಿಕೊಂಡು ಕನ್ನಡದ್ದೇ ಆದ ಸಂಜ್ಞಾ ಶಾಸ್ತ್ರವನ್ನು ರೂಪಿಸಿಕೊಳ್ಳಲು ಸಾಧ್ಯವಿದೆ.

೨೬.ಅರಿವಿನ ಸ್ವರೂಪದ ಬಗ್ಗೆ ಭಿನ್ನ ಭಿನ್ನ ಸಾಂಸ್ಕೃತಿಕ ನೆಲೆಯ ವಚನಕಾರರು ಎತ್ತಿರುವ ವಾಗ್ವಾದಗಳನ್ನೆಲ್ಲ ಪರಿಶೀಲಿಸಿ ಕನ್ನಡದ್ದೇ ಆದ ಎಪಿಸ್ಟಮಾಲಜಿ ಅಥವ ಜ್ಞಾನ ಶಾಸ್ತ್ರವನ್ನು ರೂಪಿಸಿಕೊಳ್ಳಬಹುದಾಗಿದೆ.

೨೭.ಡಿಸ್ಕೋರ್ಸ್ ಅನಾಲಿಸಿಸಿನ ತತ್ವಗಳನ್ನು ಅಳವಡಿಸಿಕೊಂಡು ವಚನಗಳ ಸಂವಾದ ಸ್ವರೂಪವನ್ನು ವಿಶ್ಲೇಷಿಸಿ ಕನ್ನಡದ್ದೇ ಆದ ಸಂವಾದ ವಿಶ್ಲೇಷಣೆಯನ್ನು ನಡೆಸಲು ಸಾಧ್ಯವಿದೆ. ಇವೆಲ್ಲ ಪ್ರತ್ಯೇಕ ಅಧ್ಯಯನವನ್ನು ಕೈಗೊಳ್ಳಬಹುದಾದ ಕ್ಷೇತ್ರಗಳು.

ಅನುಬಂಧ.

೧. ಕಲಬುರ್ಗಿ ಎಂ.ಎಂ. (ಸಂ.):೧೯೯೩:ಬಸವಣ್ಣನವರ ವಚನ ಸಂಪುಟ:ಕನ್ನಡ ಮತ್ತು ಸಂಸ್ಕೃತಿ

ನಿರ್ದೇಶನಾಲಯ: ಬೆಂಗಳೂರು

೨. ಕಲಬುರ್ಗಿ ಎಂ.ಎಂ. :೧೯೯೩: ಶಿವಶರಣೆಯರ ವಚನ ಸಂಪುಟ: ಕನ್ನಡ ಮತ್ತು ಸಂಸ್ಕೃತಿ

ನಿರ್ದೇಶನಾಲಯ: ಬೆಂಗಳೂರು

೩. ಕಲಬುರ್ಗಿ ಎಂ.ಎಂ.:೧೯೯೩: ಅಲ್ಲಮನ ವಚನ ಸಂಪುಟ: ಕನ್ನಡ ಮತ್ತು ಸಂಸ್ಕೃತಿ

ನಿರ್ದೇಶನಾಲಯ: ಬೆಂಗಳೂರು

೪. ಕೀರ್ತಿನಾಥ ಕುರ್ತಕೋಟಿ :೧೯೯೫: ಕನ್ನಡ ಸಾಹಿತ್ಯ ಸಂಗಾತಿ :ಪ್ರಸಾರಾಂಗ ಕನ್ನಡ

ವಿಶ್ವವಿದ್ಯಾಲಯ: ಹಂಪಿ

೫. ಚಿದಾನಂದ ಮೂರ್ತಿ.ಎಂ.:೧೯೬೫:ಸಾವಣ್ಣನಿಗೆ ಸಾಹಿತ್ಯ ಚರಿತ್ರೆ : ಪ್ರಸಾರಾಂಗ

ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು

೬. CHOMSKY;1992;PROBLEMS OF LANGUAGE AND KNOWLEDGE;5TH EDITION

೭. CHOMSKY;1972 ;LANGUAGE AND MIND;

೮. ಡಾ. ತಿಪ್ಪೇರುದ್ರಸ್ವಾಮಿ ಎಚ್. :೧೯೬೩: ಶರಣರ ಅನುಭಾವ ಸಾಹಿತ್ಯ : ಡಿ.ವಿ.ಕೆ.

ಮೂರ್ತಿ, ಕೃಷ್ಣಮೂರ್ತಿ ಪುರಂ: ಮೈಸೂರು

೯. ನಾಗರಾಜಪ್ಪ. ಕೆ. ಜಿ. :೧೯೮೫:ಮರುಚಿಂತನೆ :ಪ್ರಗತಿ ಪ್ರಕಾಶನ: ಮೈಸೂರು

೧೦. ನಾರಾಯಣ.ಕೆ.ವಿ.:೧೯೮೪:ಬೇಂದ್ರೆ ಕಾವ್ಯ ದೃಷ್ಟಿ:ಕನ್ನಡ ಸಂಘ ಕ್ರೈಸ್ಟ ಕಾಲೇಜ್:

ಬೆಂಗಳೂರು

೧೧. ಬರಗೂರು ರಾಮಚಂದ್ರಪ್ಪ (ಸಂ): ೧೯೯೪:ಬೆಡಗಿನ ವಚನಗಳು:ಕರ್ನಾಟಕ ಸಾಹಿತ್ಯ

ಅಕಾಡೆಮಿ: ಬೆಂಗಳೂರು

೧೨. ಬಸವರಾಜು.ಎಲ್.:೧೯೯೦: ಬಸವಣ್ಣನ ವಚನಗಳು:ಗೀತಾ ಬುಕ್ ಹೌಸ್: ಮೈಸೂರು

೧೩. ಬಸವರಾಜು.ಎಲ್. :೧೯೬೯ :ಅಕ್ಕನ ವಚನಗಳು:ಗೀತಾ ಬುಕ್ ಹೌಸ್:ಮೈಸೂರು

೧೪. ಬಸವರಾಜು. ಎಲ್. : ೧೯೭೯ : ಅಲ್ಲಮನ ವಚನಗಳು: ಗೀತಾ ಬುಕ್ ಹೌಸ್: ಮೈಸೂರು

೧೫. ಮಿತ್ರ. ಅ. ರಾ.: ೧೯ : ಶಬ್ದಕಲ್ಪ: ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು

೧೬. ರಾಘವೇಂದ್ರ ಪಾಟೀಲ (ಸಂ.): ೧೯೯೪: ನವಮೋಘರೂಪಿ (ಲೇ. ಓ. ಎಲ್. ನಾಗಭೂಷಣ ಸ್ವಾಮಿ, ಲೇ. ಅಲಿಯ ಅಯ್ಯಾಲೋ): ಸಂವಾದ ಪ್ರಕಾಶನ: ಮಲ್ಲಾಡಿ ಹಳ್ಳಿ

೧೭. ಲಕ್ಷ್ಮೀನಾರಾಯಣ ಭಟ್ಟ. ಎನ್. ಎಸ್. (ಸಂ.): ೧೯೮೯: ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ

೧೮. ಕಿ. ರಂ. ನಾಗರಾಜ, ಲೇ. ಕನ್ನಡ ಕಾವ್ಯ ಪರಂಪರೆ: ಸಂಸ್ಕೃತ ಕಾವ್ಯ ಮೀಮಾಂಸೆ (ಸಂಬಂಧ-ಸಂಕ್ರಮಣ ನೆಲೆಗಳು): ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು

೧೯. ಶಿವರುದ್ರಪ್ಪ. ಜಿ. ಎಸ್.: ೧೯೭೭: ವಚನಗಳಲ್ಲಿ ಕಾವ್ಯ ತತ್ತ್ವ: ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ

೨೦. ಶಿವರುದ್ರಪ್ಪ. ಜಿ. ಎಸ್.: ೧೯೮೯: ಬೆಡಗು: ಸುವಿದ್ಯಾ ಪ್ರಕಾಶನ: ಬೆಂಗಳೂರು

೨೧. ಶಿವರುದ್ರಪ್ಪ. ಜಿ. ಎಸ್.: ೧೯೮೯: ಕನ್ನಡ ಕವಿಗಳ ಕಾವ್ಯ ಕಲ್ಪನೆ: ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ: ಮೈಸೂರು

೨೨. ಶಿವರುದ್ರಪ್ಪ. ಜಿ. ಎಸ್.: ೧೯೯೩: ಸಮಗ್ರ ಗದ್ಯ, ಸಂಪುಟ-೧: ಶಾರದಾ ಪ್ರಕಾಶನ: ಬೆಂಗಳೂರು

೨೩. ತೀ. ನಂ. ಶ್ರೀಕಂಠಯ್ಯ: ೧೯೮೪: ಭಾರತೀಯ ಕಾವ್ಯ ಮೀಮಾಂಸೆ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ: ಬೆಂಗಳೂರು

೨೪. ಶ್ರೀನಿವಾಸ ಮೂರ್ತಿ ಎಂ. ಆರ್: ೧೯೯೪: ವಚನ ಧರ್ಮಸಾರ: ಮೈಸೂರು ವಿಶ್ವವಿದ್ಯಾನಿಲಯ: ಮೈಸೂರು

೨೫. ಸೀತಾರಾಮಯ್ಯ. ವಿ.: ೧೯೮೮: ಬಸವೇಶ್ವರ: ಐ. ಬಿ. ಹೆಚ್. ಪ್ರಕಾಶನ: ಬೆಂಗಳೂರು

೨೬. ಸೀತಾರಾಮಯ್ಯ. ವಿ.: ೧೯೭೩: ಕವಿರಾಜಮಾರ್ಗ: ಐ. ಬಿ. ಹೆಚ್. ಪ್ರಕಾಶನ: ಬೆಂಗಳೂರು

೨೭. ಸೀತಾರಾಮಯ್ಯ ಎಂ. ವಿ.: ೧೯೭೪: ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ: ಮೈಸೂರು